# ವೀಣೆ ಭವಾನಿ

ಮತ್ತು

ಇತರ ಕಥೆಗಳು

ಅನುವಾದಕರು :

ದಿವಂ. ಶ್ರೀಮತಿ ಕುಂತಳ

ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು  ನಗರ.

# ವೀಣೆ ಭವಾನಿ

ಮತ್ತು

ಇತರ ಕಥೆಗಳು

ಅನುವಾದಕರು

ದಿವಂ. ಶ್ರೀಮತಿ ಕುಂತಳಮ್ಮ

ಸತ್ಯಶೋಧನ ಪ್ರಕಟನ ಮಂದಿರ

ಕೋಟೆ, ಬೆಂಗಳೂರು ನಗರ.

# ವಿಷಯಾನುಕ್ರಮಣಿಕೆ

# ಪ್ರಕಾಶಕರ ಬಿನ್ನಹ

ಈ ದೇಶದ ಅನೇಕ ಭಾಷೆಗಳಲ್ಲಿ ಹೊಸ ರೀತಿಯ ಸಾಹಿತ್ಯವು ಹುಟ್ಟುತ್ತಾ ಇದೆ. ಪರಸ್ಪರ ವಿನಿಮಯದಿಂದ ಸಾಹಿತ್ಯದ ಪ್ರಗತಿಗೆ ಬಹು ಸಹಾಯವಾಗುತ್ತದೆಂದು ಹೇಳಬೇಕಾದುದೇ ಇಲ್ಲ. ತಮಿಳಿನಲ್ಲಿ ಪ್ರಚಾರ ವಾಗುತ್ತಿರುವ ಪುಸ್ತಕಗಳನ್ನು ಕನ್ನಡಿಸಿ ಈ ರೀತಿ ಕನ್ನಡಿಗರಿಗೆ ಉಪಕಾರ ಮಾಡಿದವರಲ್ಲಿ ಶ್ರೀ ಕುಂತಳಮ್ಮನವರೂ ಒಬ್ಬರು. ಈ ಪುಸ್ತಕದಲ್ಲಿ ಕಂಡುಬರುವ ಬರವಣಿಗೆಗಳೇ ಈ ಕಾರ್ಯದಲ್ಲಿ ಅವರಿಗಿದ್ದ ಉತ್ಸಾಹಕ್ಕೂ ದಕ್ಷತೆಗೂ ಸಾಕ್ಷಿ. ಅವರು ಕೇವಲ ಚಿಕ್ಕವಯಸ್ಸಿನಲ್ಲೇ ಕಾಲನಾಗದಿದ್ದರೆ ಅವರಿಂದ ಇನ್ನೂ ಹೆಚ್ಚು ಸೇವೆ ಕನ್ನಡಿಗರಿಗೆ ದೊರಕುತ್ತಿತ್ತು.

ಈ ಪುಸ್ತಕದಲ್ಲಿ ಪ್ರಕಟವಾಗಿರುವ ವಸ್ತುವಿನ ಕೆಲವು ಭಾಗ 'ವಿಶ್ವಕರ್ಣಾಟಕ' ವಾರಪತ್ರಿಕೆಯಲ್ಲಿ ಈ ಮುಂಚೆ ಪ್ರಕಟವಾಗಿತ್ತು. ದಿವಂಗತರ ಸಮೀಪಬಂಧುಗಳಾದ ಶ್ರೀ ಶಲ್ಲಮ್ಮನವರು ಈ ಪುಸ್ತಕದ ಸಾಮಗ್ರಿಯ ಕೆಲವು ಭಾಗ ಅಪೂರ್ಣವಾಗಿದ್ದುದನ್ನು ಪೂರ್ಣಗೊಳಿಸಿ ಅತ್ಯಾದರದಿಂದ ಪ್ರಕಟನೆಗೆ ಸಿದ್ಧಗೊಳಿಸಿದ್ದಾರೆ. ಮೂಲಸಾಮಗ್ರಿಯನ್ನು ಬರೆದವರು ತಮಿಳಿನಲ್ಲಿ ಪ್ರಸಿದ್ಧ ಲೇಖಕರಾದ ಶ್ರೀ ರಾ. ಕೃಷ್ಣಮೂರ್ತಿಗಳು ('ಕಲ್ಕಿ') ಮತ್ತು ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರು. ಅವರು ಈ ಪ್ರಕಟನೆಗೆ ಅನುಮತಿ ಕೊಟ್ಟು ಉಪಕಾರ ಮಾಡಿದ್ದಾರೆ.

ಮೇಲೆ ಹೇಳಿದ ಎಲ್ಲರ ನೆರವಿಗಾಗಿ ವಂದನೆಗಳು.

# * ಇದೆಂತಹ ಸ್ವರ್ಗ

## ೧

ರಾವ್ ಬಹದ್ದೂರ್ ರಾಮಾಶಾಸ್ತ್ರಿಗಳು ಅತ್ಯಂತ ವ್ಯಾಕುಲದಿಂದ ನಡೆದು ಹೋಗುತ್ತಿದ್ದರು. ತಮಗೆ ತಿಳಿದ ಮುಖ ಯಾವದಾದರೂ ಕಾಣಿಸುತ್ತದೆ ಯೇನೋ ಎಂಬ ಕುತೂಹಲದಿಂದ ಅವರ ಕಣ್ಣು ಸುತ್ತಲೂ ನೋಡಿತು. ' ಅಬ್ಬಾ ! ಇಲ್ಲಿಗೆ ಬಂದು ಹನ್ನೆರಡು ವರ್ಷ ದಾಟಿಲ್ಲವೆ ? ಈ ಹನ್ನೆರಡು ವರ್ಷ ಹನ್ನೆರಡು ಯುಗದ ಹಾಗೆ ತೋರುತ್ತದೆ. ಈ ಹನ್ನೆರಡು ವರ್ಷಗಳಕ್ಕೆ ಬಳಕೆಯಾದ ಮುಖ ಒಂದಾದರೂ ಕಾಣಲಿಲ್ಲವಲ್ಲ. ಹಳೆ ನೆನಪುಗಳ ವಿಷಯ ವಾಗಿ ತಮಾಷೆಯಾಗಿ ಹರಟೋಣವೆಂದರೆ ಒಂದು ಜೀವವು ಸಿಗಲಿಲ್ಲ ! ಇದೆಂ ತಹ ಸ್ವರ್ಗ ?' ಅಂದುಕೊಂಡು ನಿಟ್ಟುಸಿರು ಬಿಟ್ಟರು. ರಾಮಾಶಾಸ್ತ್ರಿಗಳು. ಅವರಿಗೆ ಸ್ವರ್ಗಲೋಕ ಸ್ವಲ್ಪವೂ ಸರಿತೋರಲಿಲ್ಲ. ಸ್ವರ್ಗಲೋಕವನ್ನು ಸೇರು ವದಕ್ಕಾಗಿ ಭೂಲೋಕದಲ್ಲಿ ತಾವು ಪಟ್ಟ ಕಷ್ಟಗಳನ್ನು ನೆನಸಿಕೊಂಡು ಅವರಿಗೆ ವಿಪರೀತ ಅಳು ಬಂತು ! ತಾವು ಮಾಡಿದ ಕಾರ್ಯಗಳನ್ನು ನೆನೆದು ವಿಪರೀತ ನಗುವೂ ಬಂತು. ಆದರೇನು? ಈ ಗತಿಗೆಟ್ಟ ಸ್ವರ್ಗದಲ್ಲಿ ಅಳುವುದುಂಟೆ? ಅಥವಾ ನಗುವುದುಂಟೆ ? ಇಲ್ಲ ! ಯಾವುದನ್ನೂ ಮಾಡಲಾಗದು. ಇವರ ಹೆಸರು ಸ್ವರ್ಗವಂತೆ ! ರಾಮ ರಾಮ ! ಶಿವ ಶಿವಾ ! ಅಯ್ಯೋ ತಪ್ಪಾಯಿತು. ಹಿಂದಕ್ಕೆ ತೆಗೆದುಕೊಳ್ಳುತ್ತೇನೆ. ಆ ರಾಮನನ್ನೂ, ಶಿವನನ್ನೂ ಪ್ರಾರ್ಥಿಸಿ ನಾನು ಈ ಸ್ವರ್ಗಕ್ಕೆ ಬಂದು ಸೇರಿದ್ದು ಸಾಲದೆ ? ಈಗ ಭೂಲೋಕಕ್ಕೆ ಹೋಗಬೇಕಾದರೆ ಯಾರನ್ನು ಪ್ರಾರ್ಥಿಸಲಿ ? ಶನೀಶ್ವರನನ್ನು ಪ್ರಾರ್ಥಿಸಲೆ ? ಶನೀಶ್ವರಾ ! ಶನೀ ಶ್ವರಾ ! ಶನೀಶ್ವರ...,.....

' ಯಾರದು ? ರಾಮಾಶಾಸ್ತ್ರಿಗಳಲ್ಲವೆ ? ' ಪಳಗಿದ ಕಂಠಸ್ವರವೊಂದು ಕಿವಿಯಲ್ಲಿ ಬೀಳಲು ಶಾಸ್ತ್ರಿಗಳು ಆಶ್ಚರ್ಯದಿಂದಲೂ, ಸಂತೋಷದಿಂದಲೂ ಮುಂದೆ ಬಂದು ನೋಡಿದರು. ನೋಡಿದರೆ ಸಾಕ್ಷಾತ್ ದಿವಾನ್ ಬಹದ್ದೂರ್ ದಿವಾಕರ ಮೊದಲಿಯಾರರು ಎದುರಿಗೆ ಬರುತ್ತಿದ್ದಾರೆ.

---

[ ಕಲ್ಕಿಯವರ ತಮಿಳು ಕಥೆಯೊಂದರ ಸರಳಾನುವಾದ ]

' ಅಹಾ ! ಮೊದಲಿಯಾರ್ರೇ. ಬನ್ನಿ ಬನ್ನಿ ನಿಮ್ಮನ್ನು ನೋಡಿ ಹದಿನೈದು ವರ್ಷಕ್ಕೆ ಮೇಲಾಯಿತಲ್ಲವೆ ? ಯಾವಾಗ ಬಂದಿರಿ ಏನು ಸುದ್ದಿ, ಏನು ಸಮಾಚಾರ ? ' ಎಂದು ಕೇಳುತ್ತಾ ಬಹಳ ಉತ್ಸಾಹದಿಂದ ಶಾಸ್ತ್ರಿಗಳು ಮುಂದೆ ಬಂದು ಮೊದಲಿಯಾರರ ಕೈ ಕುಲುಕುವ ಉದ್ದೇಶದಿಂದ ಕೈ ನೀಡಿದರು. ಸಾಧ್ಯವಾಗದಿದ್ದರಿಂದ ಮುಖದಲ್ಲಿ ನಿರಾಶೆಯ ಕುರುಹು ಕಾಣಿಸಿಕೊಂಡಿತು.

' ಏನು ಶಾಸ್ತ್ರಿಗಳೇ ? ಇದು ಸ್ವರ್ಗವೆಂಬುದನ್ನೇ ಮರೆತಂತೆ ಕಾಣುತ್ತದೆ. ಭೂಲೋಕದಲ್ಲಿರುವಂತೆ ಭಾವಿಸಿಕೊಂಡಿದ್ದೀರಾ ? ' ಎಂದು ಮೊದಲಿಯಾರರು ಹಾಸ್ಯ ಮಾಡಿದರು.

' ಅಯ್ಯೋ ಮೊದಲಿಯಾರ್ರೇ ! ನಿಮ್ಮನ್ನು ನೋಡಿದ್ದರಿಂದುಂಟಾದ ಸಂತೋಷದ ಭರದಲ್ಲಿ, ಇದು ಸ್ವರ್ಗವೆಂಬುದೇ ಒಂದು ನಿಮಿಷ ಮರೆತು ಹೋಯಿತು, ಭೂಲೋಕವೆಂದೇ ಭಾವಿಸಿ ಕೊಂಡು ಬಿಟ್ಟೆ ' ಎಂದು ಹೇಳುತ್ತಾ ಶಾಸ್ತ್ರಿಗಳು ಘಟ್ಟಿಯಾಗಿ ನಕ್ಕು ಬಿಟ್ಟರು.

ಆ ಸಮಯದಲ್ಲಿ ದೇವತೆಗಳು ಅವರ ನಗೆ ಕೇಳಿ ಅವರನ್ನು ಒಂದು ವಿಧವಾಗಿ ನೋಡಿ ಹೋದರು.

' ಈ ರೀತಿಯ ನಗೆ ಕೇಳಿ ಹತ್ತು ವರ್ಷಕ್ಕೂ ಮೇಲಾಗಿ ಹೋಯಿತು ' ಎಂದರು ಮೊದಲಿಯಾರರು.

' ಹೌದು ಹೌದು. ಅದನ್ನು ನೆನಸಿಕೊಂಡರೆ ದುಃಖ ಉಕ್ಕಿ ಉಕ್ಕಿ ಬರುತ್ತದೆ ' ಎಂದು ಹೇಳುತ್ತಾ ಶಾಸ್ತ್ರಿಗಳು ಬಿಕ್ಕಿ ಬಿಕ್ಕಿ ಅತ್ತರು.

' ಅಯ್ಯೋ ಅಳಬೇಡಿ ಶಾಸ್ತ್ರಿಗಳೇ ' ಎಂದು ಹೇಳಿ ಮೊದಲಿಯಾರರು, ' ಹೀಗೆ ಅಳುವ ಧ್ವನಿ ಕೇಳಿ ಕೂಡ ಬಹು ದಿನಗಳಾದವು ಗೊತ್ತೆ? ' ಎನ್ನುತ್ತಾ ತಾವೂ ಅಳತೊಡಗಿದರು.

ಇಬ್ಬರೂ ಒಬ್ಬರ ಕಣ್ಣನ್ನು ಒಬ್ಬರು ಒರೆಸುವ ಸಲುವಾಗಿ ಮುಂದೆ ಬಂದು, ಅದು ಆಗದೆ ಹೋಗಲು ಘಟ್ಟಿಯಾಗಿ ನಕ್ಕುಬಿಟ್ಟರು.

' ಹಾಗಾದರೆ ಸ್ವರ್ಗ ನಿಮ್ಮ ಮನಸ್ಸಿಗೂ ಹಿಡಿಯಲಿಲ್ಲವೆನ್ನಿ ' ಎಂದರು ಮೊದಲಿಯಾರರು ?

‘ ಸ್ವರ್ಗ ಮನಸ್ಸಿಗೆ ಹಿಡಿಯಲಿಲ್ಲವೆ ಎಂದು ಕೇಳುತ್ತೀರಾ ! ಸ್ವರ್ಗವೆನ್ನು ವುದು ಹೀಗೆ ಎಂದು ತಿಳಿದಿದ್ದರೆ ಅಷ್ಟೊಂದು ದಾನ, ಧರ್ಮ, ತಲೆ ಹೊಡೆದು ಕೊಳ್ಳುವುದು, ಮೂಗು ಹಿಡಿದುಕೊಳ್ಳುವುದು, ಗುಡಿಗೆ ಹೋಗುವುದು—ಇವ ನ್ನೆಲ್ಲಾ ಮಾಡುತ್ತಲೇ ಇರಲಿಲ್ಲ. ಈ ಸ್ವರ್ಗಕ್ಕೆ ಬರುವುದಕ್ಕಾಗಿ ಭೂಲೋಕ ವನ್ನು ಚೆನ್ನಾಗಿ ಅನುಭವಿಸದೇ ಹೋದೆವಲ್ಲಾ ! ಎಂತಹ ಮುಠ್ಠಾಳತನವಾ ಯಿತು ! ’

“ ಓಹೋ ನನ್ನ ಮನಸ್ಸಿನಲ್ಲಿರುವುದನ್ನೇ ತಾವೂ ಹೇಳುತ್ತಿರುವಿರಲ್ಲಾ ಶಾಸ್ತ್ರಿಗಳೇ ! ಎಲ್ಲಾದರೂ ಒಂದು ಕಡೆ ಕುಳಿತುಕೊಂಡು ಸಾವಕಾಶವಾಗಿ ಮಾತನಾಡೋಣ. ಅದಿರಲಿ. ಈಗ ಎಲ್ಲಿಗೆ ಹೋಗುತ್ತಿದ್ದೀರಿ ? ಎಂದು ಕೇಳಿ ದರು ಮೊದಲಿಯಾರರು.

‘ ಎಲ್ಲಿಗೆ ಹೋಗುವುದು ? ಈ ಹಾಳು ಸ್ವರ್ಗದಲ್ಲಿ, ಎಲ್ಲಿ ಹೋದರೂ ಒಂದೇ ಲಕ್ಷಣವೇ ’ ಎಂದು ಶಾಸ್ತ್ರಿಗಳು ಪೇಚಾಡಿಕೊಂಡು ಹೇಳಿದರು.

‘ ಹಾಗಾದರೆ, ಬನ್ನಿ ! ಅದೋ ! ಅಲ್ಲಿ ಕಾಣುವ ಮಂದಾರ ವೃಕ್ಷದಡಿ ಯಲ್ಲಿ ಕುಳಿತು ವಿರಾಮವಾಗಿ ಮಾತನಾಡೋಣ ’ ಎಂದರು ಮೊದಲಿಯಾರ್ರು.

ಇಬ್ಬರೂ ಹೋಗಿ ಹತ್ತಿರದಲ್ಲಿ ಇದ್ದ ಒಂದು ಮಂದಾರ ವೃಕ್ಷದಡಿಯಲ್ಲಿ ಕುಳಿತುಕೊಂಡರು.

೨

ಮಂದಾರವೃಕ್ಷ ಪುಷ್ಪಭರಿತವಾಗಿ ಮನಸ್ಸಿಗೆ ಆಹ್ಲಾದವನ್ನುಂಟುಮಾಡು ತ್ತಿತ್ತು. ಆ ಪುಷ್ಪಗಳಿಂದ ಹೊರಟ ಸುವಾಸನೆ ನಾಲ್ಕು ದಿಕ್ಕುಗಳಿಗೂ ಪ್ರಸರಿ ಸಿದ್ದಿತು. ಕೊಂಬೆಗಳ ಮೇಲೆ ಕುಳಿತು ಕೋಗಿಲೆ ತನ್ನ ದಿವ್ಯ ಕಂಠದಿಂದ ಹಾಡುತ್ತಿತ್ತು. ಮರದಡಿಯಲ್ಲಿ ಹಸಿರು ರತ್ನಕಂಬಳಿ ಹಾಸಿದಂತೆ ಹಸಿರುಹುಲ್ಲು ಸೊಂಪಾಗಿ ಬೆಳೆದಿತ್ತು.

ಶಾಸ್ತ್ರಿಗಳು ಒಂದು ಹುಲ್ಲು ಕಡ್ಡಿ ಕಿತ್ತು ಬಾಯಲ್ಲಿಟ್ಟುಕೊಂಡು ಕಡಿದರು, “ಏನು ಶಾಸ್ತ್ರಿಗಳೇ ಹುಲ್ಲು ತಿನ್ನುತ್ತೀರಿ ಹುಲಿ ಹಸಿದರೂ ಹುಲ್ಲು ತಿನ್ನುತ್ತಸೆಯೆ ಎಂಬ ಗಾದೆಗೆ ಯಾವ ಗತಿ ಬಂತು?”ಎನ್ನುತ್ತಾ ಮೊದಲಿಯಾರ್ರು ಘಟ್ಟಿಯಾಗಿ ನಕ್ಕರು.

" ಅದೆಲ್ಲಾ ಭೂಲೋಕದ ಗಾದೆ. ಈ ಗತಿಗೆಟ್ಟ ಸ್ವರ್ಗದಲ್ಲಿ ಹುಲಿಗೆ ಹಸಿವೇ ಆಗುವುದಿಲ್ಲ " ಎನ್ನುತ್ತಾ ಶಾಸ್ತ್ರಿಗಳೂ ಘಟ್ಟಿಯಾಗಿ ನಕ್ಕರು.

" ಮತ್ತೆ ನೀವು ಹುಲ್ಲೇಕೆ ತಿನ್ನುತ್ತೀರಿ ? "

" ಮತ್ತೇನಿದೆ ಇಲ್ಲಿ ತಿನ್ನುವುದಕ್ಕೆ ? ಅಮೃತವೊಂದು ಬಿಟ್ಟರೆ ಬೇರೆ ಯಾವ ಮಣ್ಣೂ ಇಲ್ಲ ಈ ಸ್ವರ್ಗದಲ್ಲಿ. ಆ ಹಾಳು ಅಮೃತವನ್ನು ಕುಡಿದು ಕುಡಿದು ನಾಲಿಗೆ ಮರಗಟ್ಟಿ ಹೋಗಿದೆ. "

" ಏನು ಶಾಸ್ತ್ರಿಗಳೇ ? ಭೂಲೋಕದಲ್ಲಿ ಯಾವ ರುಚಿ ಪದಾರ್ಥವನ್ನು ತಿಂದರೂ ಅಮೃತಕ್ಕೆ ಹೋಲಿಸುತ್ತಿದ್ದಿರಲ್ಲಾ ! ಇನ್ನು ಮೇಲೆ ಹಾಗೆ ಹೇಳುವುದಿಲ್ಲ ತಾನೆ ? "

" ಅಯ್ಯೋ ! ನನ್ನ ಹೊಟ್ಟೆಯುರಿಯನ್ನು ಕೆಣಕಬೇಡಿ ಮೊದಲಿಯಾರ್ರೇ ! ಇಡ್ಲಿ, ಚಟ್ನಿ, ಬೆಣ್ಣೆ ಇವೆಲ್ಲಾ ಈ ಹಾಳು ಸ್ವರ್ಗದಲ್ಲಿಲ್ಲವೆಂಬುದು ಮಾತ್ರ ತಿಳಿದಿದ್ದರೆ.... .ಅಮೃತವಂತೆ ! ಅಮೃತ ! "

"ಆನಂದ ಭವನ'ದಲ್ಲಿ ಈರುಳ್ಳಿ ಗೊಜ್ಜು ಮಾಡುತ್ತಾರಲ್ಲಾ, ಅದರ ಕಾಲ್ಕೆಳಗೆ ಹಾಕಿ ತುಳಿಸಬೇಕು ಈ ಅಮೃತವನ್ನು ''

" ಅಹಾ ? ನಾವು ಸೆಂಟ್ರಲ್ ಕಾಲೇಜಿನಲ್ಲಿದ್ದಾಗ ನಾರಾಯಣನ ಹೋಟಲಿನಲ್ಲಿ ಮಸಾಲೆದೋಸೆ, ವಲ್ಯ, ತಿನ್ನುತ್ತಿದ್ದೆವಲ್ಲಾ ಜ್ಞಾಪಕವಿದೆಯೇ "

" ಅದನ್ನು ಜ್ಞಾಪಿಸಿಕೊಂಡರೆ ಬಾಯಲ್ಲಿ ನೀರೂರುತ್ತೆ. "

'' ಇದೆಲ್ಲಾ ಸರಿಯೆ, ಯಾವುದು ಹೇಗಾದರೂ ಹೋಗಲಿ ಕಾಫೀ ಇಲ್ಲದ ಸ್ವರ್ಗ, ಸ್ವರ್ಗವೆ ಅನ್ನುತ್ತೀನೆ ''.

ಈ ಸಮಯದಲ್ಲಿ ಮಂದಾರ ವೃಕ್ಷದ ಮೇಲಿದ್ದ ಕೋಗಿಲೆಯೊಂದು ಬಗ್ಗಿ ನೋಡಿ ' ಕೂ, ಕೂ ' ಎಂದು ಹಾಡಿತು.

" ಮೊದಲಿಯಾರ್ರೇ ! ಸ್ವಲ್ಪ ಈ ಕೋಗಿಲೆ ಕೂಗದ ಹಾಗೆ ಮಾಡುತ್ತೀರಾ ದಯವಿಟ್ಟು ? ಇಲ್ಲದೆ ಹೋದರೆ ನಾನೆಲ್ಲಾದರೂ ಓಡಿ ಹೋಗಲೋ ಇದರ ಕೂಗನ್ನು ಕೇಳಲಾರೆ ".

'' ಏನು ಶಾಸ್ತ್ರಿಗಳೇ ! ಭೂಲೋಕದಲ್ಲಿದ್ದಾಗ ಒಳ್ಳೆಯ ಧ್ವನಿ ಎಲ್ಲಿ ಕೇಳಿದರೂ ಕೋಗಿಲೆಗೆ ಹೋಲಿಸುತ್ತಿದ್ದಿರಿ. ಈಗೇನು, ಹೀಗೆ ಹೇಳುತ್ತೀರಿ? "

"ಅಯ್ಯೋ ಶನಿಯೆ ! ಭೂಲೋಕದಲ್ಲಿದ್ದಾಗ ಕೋಗಿಲೆಯ ಧ್ವನಿಯನ್ನೇ ನಾನು ಕೇಳಿರಲಿಲ್ಲವಲ್ಲಾ ! ಆದರಿಂದ ತಾನೇ ನಾನು ಹಾಗೆ ಹೇಳುತ್ತಿದ್ದೆ".

"ಈ ಸ್ವರ್ಗದಲ್ಲಿ ನೋಡಿ ಸಂಗೀತ ಎಷ್ಟು ಸರ್ವೇಸಾಧಾರಣವಾಗಿದೆ. ಬರೀ ಸಂಗೀತವೇ ಎಲ್ಲಿ ಹೋದರೂ".

"ಆಹಾ ! ನಾವು ಮದ್ರಾಸಿನಲ್ಲಿ ನಡೆಸಿದೆವಲ್ಲಾ ಕರ್ಣಾಟಕ ಪುನರುದ್ಧಾರಣ ಸಭೆ ! ಎಷ್ಟು ಜೋರಾಗಿ ನಡೆಸಿದೆವು ?"

" ಅ ಹ ಹ ! ಇಲ್ಲಿ ಹಾಡುತ್ತಾರಲ್ಲಾ ತಲೆಗೊಂದು ವೀಣೆ ಹಿಡಿದುಕೊಂಡು. ಇದೂ ಹಾಡೆ, ನಾಲ್ಕು ಆವರ್ತ ಸ್ವರ ಹಾಕಿಕೊಂಡು ಪಲ್ಲವಿ ಹಾಡುವ ವಿದ್ವಾಂಸರು ಇಲ್ಲಿ ಯಾರಿದ್ದಾರೆ ? ನಮ್ಮ ಊರಿನಲ್ಲಿ ಸಂಗೀತ ಕೇಸರಿಯ ಕಛೇರಿ ನಡೆದಾಗ ಮೃದಂಗ, ಕಂಜೀರ, ಪಿಟೀಲು, ಘಟ, ಕೊಳಲು, ಇಷ್ಟು ಪಕ್ಕವಾದ್ಯಗಳು ಇದ್ದು ಕಛೇರಿ ಎಷ್ಟು ಸೊಗಸಾಗಿ ನಡೆಯಿತು. ಅದು ಸಂಗೀತವೋ ? ಇಲ್ಲ ಇಲ್ಲಿ ಅಳುತ್ತಾರಲ್ಲಾ ಒಬ್ಬೊಬ್ಬರೂ ವೀಣೆ ಹಿಡಿದುಕೊಂಡು ಇದು ಸಂಗೀತವೋ ?"

" ಅಯ್ಯೋ, ಹೌದು ಹೌದು, ಇಲ್ಲಿ ನಾನು ಎಷ್ಟೋ ಜನಗಳನ್ನು ಕೇಳಿದೆ ಹಾರ್ಮೋನಿಯಂ ಬಾರಿಸಲು ಬರುತ್ತದೆಯೇ ಎಂದು. ಇಲ್ಲಿರುವವರೊಬ್ಬರೂ ಅದರ ಹೆಸರನ್ನೇ ಕೇಳಿಲ್ಲವಂತೆ ".

"ಸರಿಯಾಯಿತು ಹಾಗಾದರೆ ಅದೊಂದೇ ಒಳ್ಳೆಯ ಅಂಶ ಈ ಸ್ವರ್ಗದಲ್ಲಿ. ನನ್ನ ಸೊಸೆ ಸುಲೋಚನಾ, ಪ್ರತಿ ದಿನವೂ ಹಾರ್ಮೋನಿಯಂ ತೆಗೆದು ಬಾರಿಸಿಕೊಂಡು ಅಳುವುದನ್ನು ಕೇಳಿ ಸಹಿಸಲಾರದೆ ತಾನೆ ನಾನು ಅದಷ್ಟು ಬೇಗ ಸ್ವರ್ಗಕ್ಕೆ ಬಂದು ಬಿಡಬೇಕೆಂದು ಬಯಿಸಿದೆ. ಅಮ್ಮಮ್ಮಾ ಅವಳು ನನ್ನನ್ನು ಹಾಸ್ಯಮಾಡಿದ್ದೆಲ್ಲಾ, ನೆನಸಿಕೊಂಡರೆ ಹೇಗಾಗುತ್ತದೆ ಗೊತ್ತೆ. ನಾನು ಶುದ್ಧಗೊಡ್ಡೆಂದೂ ನಾನು ಭಗವದ್ಗೀತೆ ವ್ಯಾಖ್ಯಾನ ಮಾಡುವುದನ್ನೆಲ್ಲಾ ಬಹಳ ಹಾಸ್ಯ ಮಾಡುತ್ತಿದ್ದಳು. ಅವಳು ಮುಖಕ್ಕೆ ಪೌಡರ್ ಹಾಕಿಗೊಂಡು, ಜಾರ್ಜೆಟ್ ಸೀರೆ ಉಟ್ಟುಕೊಂಡು ತಲೆಗೆ ರಿಬ್ಬನ್ ಹಾಕಿಕೊಂಡು ತಳುಕು ಮಾಡುತ್ತಿದ್ದಳು. ಅದಕೆ ನಮ್ಮ ಹುಡುಗ ಇದ್ದನಲ್ಲಾ ಮೊದಲಿಯಾರ್ರೇ ! ಅವನು ಇದಕ್ಕೆ ಪ್ರತಿಯಾಗಿದ್ದ ನೋಡಿ ! ನಮ್ಮೂರಲ್ಲಿ ನಾನು ಭಗವದ್ಗೀತೆ ಓದುತ್ತಿದ್ದರೆ ನನ್ನ ಸುಗ

ಸ್ವಾಮಿಯೊಬ್ಬನೇ ಕಡೆಯವರೆಗೆ ಕುಳಿತು ಕೇಳುತ್ತಿದ್ದ. ಅಹಾ ! ಎಷ್ಟು ಶ್ರದ್ಧೆಯಿಂದ ಕೇಳುತ್ತಿದ್ದ ! ”

“ಶಾಸ್ತ್ರಿಗಳೇ ! ನಿಮ್ಮ ಮನಸ್ಸಿನಲ್ಲಿರುವುದು ಈಗ ಗೊತ್ತಾಯಿತು. ನಿಮ್ಮ ಭಗವದ್ಗೀತೆ ಕೇಳುವವರು ಈ ಸ್ವರ್ಗದಲ್ಲಿ ಯಾರೂ ಇಲ್ಲವಲ್ಲ ಎಂಬುದು ತಾನೇ ನಿಮ್ಮ ಕೊರತೆ ? ”

“ಅಹಾ ! ಅಡ್ಡಿಯಿಲ್ಲ ! ಈ ಸ್ವರ್ಗದಲ್ಲಿರುವವರು, ಭಗವದ್ಗೀತೆ, ಉಪನಿಷತ್, ಪುರಾಣ ಇವುಗಳಾವುದನ್ನೂ ಕಣ್ಣೆತ್ತಿಯೂ ನೋಡುವುದಿಲ್ಲ. ಶುದ್ಧ ನಾಸ್ತಿಕರು ಯಾವಾಗಲೂ ಆಟಪಾಟಗಳಲ್ಲೇ ಮಗ್ನರಾಗಿರುತ್ತಾರೆ. ಏನಪ್ಪಾ ನಾಳೆ ನಮ್ಮ ಗತಿ ? ಏನು ಮಾಡಿದರೆ ನಮಗೆ ಮುಕ್ತಿ ? ಇದೊಂದೂ ಅವರಿಗೆ ಗಮನವೇ ಇಲ್ಲ ’

“ಅದಿರಲಿ ಮೊದಲಿಯಾರ್ರೇ, ಇಲ್ಲಿ ಸಾಯಂಕಾಲ ನಿಮಗೆ ಹೊತ್ತು ಹೇಗೆ ಹೋಗುತ್ತದೆ? ಬೀಚಿದೆಯೇ ? ಕ್ಲಬ್ಬಿದೆಯೇ ? ಸಂಗೀತ ಕಛೇರಿಯೇ ? ಏನಿದೆ ಹೋಗುವುದಕ್ಕೆ ? ದಿನವೂ ಸಾಯಂಕಾಲ ಬಂದರೆ ಭಗವದ್ಗೀತೆಯಲ್ಲಿ ನಾಲ್ಕು ಶ್ಲೋಕಗಳನ್ನು ಹೇಳುತ್ತೇನೆ”

‘ಶಾಸ್ತ್ರಿಗಳೇ ಸಾಕು ನಿಲ್ಲಿಸಿ. ಭೂಲೋಕದಲ್ಲಿ ನಿಮ್ಮ ಭಗವದ್ಗೀತೆ ಕೇಳಿ ಕೇಳಿ ಸಾಕಾಗಿ ಹೋಗಿದೆ, ಬೇರೆ ಯಾವುದಾದರೂ ಮಾತನಾಡುವುದಾದರೆ ಇಲ್ಲಿರುತ್ತೇನೆ. ಇಲ್ಲದಿದ್ದರೆ ಇದೋ ಕಾಲಿಗೆ ಬುದ್ಧಿ ಹೇಳುತ್ತೇನೆ’ ಹೀಗೆಂದು ಹೇಳುತ್ತ ಮೊದಲಿಯಾರರು ಎದ್ದು ನಿಲ್ಲಲು ಶಾಸ್ತ್ರಿಗಳು ಕೈಮುಗಿದುಕೊಂಡು, ‘ಬೇಡಿ, ಹೋಗಬೇಡಿ ನಾನು ಭಗವದ್ಗೀತೆ ವಿಷಯವಾಗಿ ಮಾತನಾಡುವುದಿಲ್ಲ. ಬೇರೆ ಏನಾದರೂ ಮಾತಾಡೋಣ ದಯವಿಟ್ಟು ಕುಳಿತುಕೊಳ್ಳಿ ’ ಎಂದು ಬೇಡಿಕೊಂಡು, ‘ಬೇರೆ ಯಾವ ವಿಚಾರವಾಗಿ ಮಾತನಾಡೋಣ’ ಎಂದು ಕೇಳಿದರು.

“ ಅಯ್ಯೋ ವಿಷಯಗಳಿಗೇನು ಬೇಕಾದಷ್ಟಿವೆ. ಉದಾಹರಣೆಗಾಗಿ ಈ ಸ್ವರ್ಗದಲ್ಲಿರುವ ಸ್ತ್ರೀಯರು ಅವರ ವಿಷಯವಾಗಿ ನಿಮ್ಮ ನಿಜವಾದ ಅಭಿಪ್ರಾಯ ಹೇಳಿ. ”

“ಅಯ್ಯೋ !- ಇಲ್ಲಿನ ಸ್ತ್ರೀಯರೆಲ್ಲಾ ನೋಡುವುದಕ್ಕೆ ಒಂದೇ ಮಾದರಿ. ಅವರಲ್ಲಿ ವಿಶೇಷವೇನಿದೆ? ಭೂಲೋಕದಲ್ಲಾದರೋ, ನಮ್ಮ ಕಾಲದಲ್ಲಿದ್ದಳಲ್ಲಾ

ಮಿಸ್ ಮಾಲತಿ.' ಆಹಾ ಅವಳ ಅಂದವೋ-ಚೆಂದವೋ.......''

''ಆಹಾ ! ಆಹಾ !.....''

೩

ಮೇಲೆ ಹೇಳಿದ ಸಂಭಾಷಣೆಯ ಜೊತೆಗೆ ಶಾಸ್ತ್ರಿಗಳೂ ಮೊದಲಿಯಾರ್ರೂ ಇನ್ನೂ ಏನೇನೋ ಮಾತನಾಡಿದರು. ಅದೆಲ್ಲಾ ಪ್ರಕಟಿಸಲು ಯೋಗ್ಯವಲ್ಲ. ಕಡೆಗೆ "ಆ ಮಾಲತಿಯ ಹೆಸರು ಕೆಲವು ದಿನ ಪತ್ರಿಕೆಗಳಲ್ಲಿ ಕೂಡ ಆಗಾಗ್ಗೆ ಬರುತ್ತಿತ್ತಲ್ಲವೆ ?'' ಎಂದರು ಮೊದಲಿಯಾರ್ರು-

'' ಹೌದು ಹೌದು ! ನೀವು ಪತ್ರಿಕೆ ಎಂದೊಡನೆ ಜ್ಞಾಪಕಕ್ಕೆ ಬಂತು. ಅಲ್ಲಾ ! ಈ ಸ್ವರ್ಗದಲ್ಲಿ ಒಂದು ಪತ್ರಿಕೆ ಕೂಡ ಇಲ್ಲವಲ್ಲಾ ! ಏನು ಗತಿಗೆಟ್ಟ ಸ್ವರ್ಗ ಇದು ? ''

''ನಿಜ ಶಾಸ್ತ್ರಿಗಳೇ ಪೇಪರ್ ಇಲ್ಲದ್ದು ಒಂದು ದೊಡ್ಡ ಕೊರತೆ ಈ ಸ್ವರ್ಗದಲ್ಲಿ. ನಿಮಗೆ ಸಮಾಚಾರ ಗೊತ್ತೇನು? ಈಗ ಭೂಲೋಕದಲ್ಲಿ ದೊಡ್ಡ ಯುದ್ಧ ನಡೆಯುತ್ತಿದೆಯಂತೆ. ನಮ್ಮ ಕಾಲದಲ್ಲಿ ನಡೆಯಿತಲ್ಲಾ ಅದು ಯುದ್ಧವೆ ಅಲ್ಲ. ಈಗ ನಡೆಯುತ್ತಿರುವುದು ಅದಕ್ಕೆ ಎಂಟು ಪಾಲು ಘೋರವಾಗಿ ನಡೆಯುತ್ತಿದೆಯಂತೆ ''.

''ಇದು ನಿಜವೆ ? ಆಹಾ ! ಇಂತಹ ಸಮಯದಲ್ಲಿ ನಾವು ಭೂಲೋಕದಲ್ಲಿರದೆ, ಇಲ್ಲಿ ಬಂದು ಕುಳಿತೆವಲ್ಲಾ ? ಅದಿರಲಿ. ನಿಮಗೆ ಹೇಗೆ ತಿಳಿಯಿತು ಭೂಲೋಕದ ಸಮಾಚಾರ ? ''

' ಈಗ ೪-೫ ದಿನಗಳ ಹಿಂದೆ ಒಬ್ಬನು ಭೂಲೋಕದಿಂದ ಬಂದ. ಅವನನ್ನು ಕೇಳಿದ್ದಕ್ಕೆ ಇವೆಲ್ಲಾ ತಿಳಿಯಿತು. '

''ನೀವೇ ಅದೃಷ್ಟಶಾಲಿಗಳು. ಭೂಲೋಕದಿಂದ ಬಂದವನನ್ನು ನೋಡಿ ಮಾತಾಡಿದಿರಿ. ಅವನು ಇನ್ನೂ ಏನೇನು ಹೇಳಿದ?''

''ಯುದ್ಧವೆಂದರೆ ನಮ್ಮ ನಿಮ್ಮ ಮನೆಗಳ ಯುದ್ಧವಲ್ಲವಂತೆ. ಆಕಾಶದಲ್ಲಿ ವಿಮಾನದಲ್ಲಿ ಬಂದು ಬಾಂಬು ಹಾಕುತ್ತಾರಂತೆ. ಊರಿಗೆ ಊರೇ ಹತ್ತಿಕೊಂಡು ಉರಿಯುತ್ತದೆಯಂತೆ. ಅಲ್ಲಾ ಶಾಸ್ತ್ರಿಗಳೇ ನಾವೆಲ್ಲಾ ಪುರಾಣದಲ್ಲಿ

ಓದುತ್ತಿರಲಿಲ್ಲವೆ? ದೇವತೆಗಳಿಗೂ, ದಾನವರಿಗೂ ಬಹು ಜೋರಾಗಿ ಯುದ್ಧ ನಡೆಯಿತೆಂದು, ಇಲ್ಲಿ ನೋಡಿದರೆ ಯುದ್ಧವೂ ಇಲ್ಲ ಮಣ್ಣೂ ಇಲ್ಲ''.

" ಅಯ್ಯೋ ನಿಮಗೆ ಗೊತ್ತಿಲ್ಲವೆ ? ದಾನವರನ್ನೆಲ್ಲಾ ಕೊಂದುಬಿಟ್ಟಿದ್ದಾರಂತೆ. ಇನ್ನು ಮೇಲೆ ಇಲ್ಲಿ ಯುದ್ಧ ನಡೆಯುವುದಿಲ್ಲವಂತೆ.

"ಅಯ್ಯೋ ಇಷ್ಟೇನೇ".

" ಹೌದು ಮೊದಲಿಯಾರ್ರೇ ! ಯಾರೋ ಭೂಲೋಕದಿಂದ ಬಂದನೆಂದು ಹೇಳಿದಿರಲ್ಲಾ ಅವನನ್ನು ಎಲ್ಲಿ ನೋಡಿದಿರಿ ? ನನ್ನ ಕಣ್ಣಿಗೆ ಬೀಳಲಿಲ್ಲವಲ್ಲಾ?"

" ಎಲ್ಲಿ ನೋಡಿದೆನೆಂದು ಕೇಳುತ್ತೀರಾ ? ಹೇಳುವುದಕ್ಕೆ ಭಯವಾಗುತ್ತದೆ.."

" ಭಯವೇಕೆ ? "

"ನಾನು ಈ ಸ್ವರ್ಗಕ್ಕೆ ಕೊನೆ ಯಾವುದು ಎಂದು ತಿಳಿದುಕೊಳ್ಳುವುದಕ್ಕಾಗಿ ಹೋಗುತ್ತಿದ್ದೆ, ಸ್ವಲ್ಪ ದೂರ ಹೋಗುತ್ತಲೂ ಒಂದು ಗವಿಯ ಬಾಗಿಲು ಸಿಕ್ಕಿತು. ಅದರೊಳಗಿನಿಂದ ಸ್ವಲ್ಪ ಸ್ವಲ್ಪ ಹೊತ್ತಿಗೆಲ್ಲಾ ಒಬ್ಬೊಬ್ಬರು ಭೂಲೋಕದಿಂದ ಬರುತ್ತಿರುತ್ತಾರಂತೆ.

" ಆ ಗವಿಯೊಳಗೆ ಹೋಗಿ ನೋಡಿದಿರಾ ?

" ಇಲ್ಲ ಭಯವಾಗಿ ಹೋಯಿತು. ಅದರೊಳಗೆ ಹೋದವರೊಬ್ಬರೂ ತಿರುಗಿ ಬರಲೇ ಇಲ್ಲ.

" ಏನು ಇದು ನಿಜವೆ ಶಾಭಾಸ್ " ಎಂದರು ಶಾಸ್ತ್ರಿಗಳು. ಸಂತೋಷದಿಂದ "ಏಕೆ, ಏತಕ್ಕೆ ಶಾಭಾಸ್ '' ಎಂದು ಕೇಳಿದರು ಮೊದಲಿಯಾರ್ರು.

' ಆ ಗವಿಯೇ ಭೂಲೋಕಕ್ಕೆ ಹೋಗುವ ದಾರಿಯಾಗಿರಬೇಕು ಮೊದಲಿಯಾರ್ರೇ ! ಈಗ ಹೇಳಿ. ನಿಮಗೆ ನಿಜವಾಗಿಯೂ ಈ ಸ್ವರ್ಗ ಇಷ್ಟವಾಯಿತೆ '

"ನಿಜವಾಗಿಯೂ ಇಷ್ಟವಾಗಲಿಲ್ಲ "

"ಭೂಲೋಕಕ್ಕೆ ಹೋಗಲು ಇಷ್ಟವಿದೆಯೊ"

"ಇದೆ."

ಹಾಗಾದರೆ ನಡೆಯಿರಿ. ಆ ಗವಿಯ ಹತ್ತಿರ ಹೋಗೋಣ ಎಂದು ಹೇಳಿ ಇಬ್ಬರೂ ಹೊರಟರು. ಸ್ವಲ್ಪ ದೂರ ಹೋದ ಮೇಲೆ ಮೊದಲಿಯಾರ್ರು 'ಅದೋ' ಎಂದರು. ಒಂದು ನೀಲ ಮೇಘ ಕಾಣಿಸಿತು. ಅದರ ಮಧ್ಯೆ ಒಂದು ಬಿಲವು ಕಾಣಿಸಿತು. ಇಬ್ಬರೂ ಆ ಬಿಲದೊಳಗೆ ಹೋದರು. ಸ್ವಲ್ಪ ದೂರ ಹೋದ ಮೇಲೆ ಮುಂದಕ್ಕೆ ದಾರಿಯೇ ಕಾಣಿಸಲಿಲ್ಲ. ಮುಂದೆ ನೋಡಿದರೆ ಅಗಾಧ ಪಾತಾಳ

"ಅಪ್ಪಮ್ಮಾ! ಎಷ್ಟು ದೊಡ್ಡ ಹಳ್ಳ! ಇದರಲ್ಲಿ ಬಿದ್ದು ಬಿಟ್ಟರೆ .."

"ಭೂಲೋಕಕ್ಕೆ ಹೋಗಬಹುದು" ಎಂದು ಮೊದಲಿಯಾರ್ರು ಹೇಳಿದ್ದು ಶಾಸ್ತ್ರಿಗಳ ಕಿವಿಯಲ್ಲಿ ಬಿದ್ದಿತು, ಅಷ್ಟೆ! ಮರುಕ್ಷಣದಲ್ಲಿ ಶಾಸ್ತ್ರಿಗಳು ಕೆಳಗೆ ಬೀಳುತ್ತಾ ಇದ್ದರು. ಎಷ್ಟು ಹೊತ್ತು ಹೀಗೆ ಕೆಳಕ್ಕೆ ಹೋದರೋ ಅವರಿಗೆ ತಿಳಿಯಲಿಲ್ಲ ಸ್ವಲ್ಪ ಹೊತ್ತಿಗೆಲ್ಲಾ ಜ್ಞಾನಹೋಗಿಬಿಟ್ಟಿತು.

೪

ಶಾಸ್ತ್ರಿಗಳಿಗೆ ಪುನಃ ಪ್ರಜ್ಞೆ ಬಂದಾಗ ಅವರ ಕಿವಿಗೆ ಪಟಾಕಿಯ 'ಟಪ್ ಟಪ್' ಎಂಬ ಶಬ್ದ ಕೇಳಿಸಿತು. ಅವರ ಕೆಳಗೂ ಪಕ್ಕಗಳಲ್ಲಿಯೂ ಯಾವುದೋ ಒಂದು ಮೃದುವಾದ ವಸ್ತುವು ಇದ್ದಂತೆ ಭಾವನೆಯುಂಟಾಯಿತು. "ಅಹಾ! ಇದೇನು? ಸ್ವರ್ಗದಲ್ಲಿ ಸ್ಪರ್ಶವೆಂಬುದೇ ಇಲ್ಲವಲ್ಲಾ? ಭೂಲೋಕದಲ್ಲಿ ಒಳ್ಳೆ ಮೆತ್ತೆಯ ಮೇಲೆ ಮಲಗಿರುವಂತೆ ತೋರುತ್ತಿದೆಯಲ್ಲಾ? ಇದೇನು ಸ್ವಪ್ನವೋ? ದಿವಾಕರ ಮೊದಲಿಯಾರ್ರೆಲ್ಲಿ?"

ಯಾರದೋ ಧ್ವನಿ ಕೇಳಿ ಬಂತು. ಆದರೆ ಮೊದಲಿಯಾರರ ಧ್ವನಿಯಲ್ಲ. ಸ್ತ್ರೀ ಧ್ವನಿ. ಯಾರೋ ಹತ್ತಿರ ಬಂದು, ಒಗ್ಗಿ ನೋಡುವ ಹಾಗೆ ಕಾಣಿಸಿತು. ಓಹೋ! ನನ್ನ ಹೆಂಡತಿ ಸೀತಾಲಕ್ಷ್ಮಿಯಲ್ಲವೆ? ಆದರೆ ಇದೇನು ಇಷ್ಟು ಬದಲಾವಣೆ? ಮುಖವೆಲ್ಲಾ ಸುಕ್ಕು ಕಟ್ಟಿದೆ. ತಲೆಯೆಲ್ಲಾ ನರೆತು ಹೋಗಿದೆ! ಸರಿಯೆ; ನಾನು ನೋಡಿ ಹನ್ನೆರಡು ವರ್ಷಗಳಾಗಲಿಲ್ಲವೆ!

"ತಾತನನ್ನೇ ಹೋಲುತ್ತಾನೆ ಎಲ್ಲದರಲ್ಲೂ" ಎಂದಳು ಸೀತಾಲಕ್ಷ್ಮಿ. ಶಾಸ್ತ್ರಿಗಳಿಗೆ ಏನೂ ಅರ್ಥವಾಗಲಿಲ್ಲ.

ಇನ್ನೊಂದು ಕಂಠಸ್ವರ ಪಕ್ಕದಲ್ಲಿ ಕೇಳಿಸಿತು. "ಹಾಗೆಲ್ಲಾ ಅಪಶಕುನ ನುಡಿಯಬೇಡಿ. ಅವರಿಗೆ ನನ್ನನ್ನು ಕಂಡರೇ ಆಗದು. ಅವರು ನನ್ನ ಹೊಟ್ಟೆಯಲ್ಲಿ ಹುಟ್ಟಲಾರರು." ಎಂದು ಅವರ ಸೊಸೆಯ ಧ್ವನಿ ಕೇಳಿಬಂತು.

'ಹಾಗೆಲ್ಲಾ ಹೇಳಬೇಡಮ್ಮ; ಮನಸಿನಲ್ಲಿ ಅವರಿಗೆ ನಿನ್ನಮೇಲೆ ಬಹಳ ಪ್ರೀತಿಯಿತ್ತು ; ಕೊನೆಯತನಕ ಮಗುವಿನಹಾಗೆ ಪಟಾಕಿ ಸುಡುವುದು ಹೂ ಬಾಣ ಹೊತ್ತಿಸುವುದು ಇವೆಲ್ಲಾ ಅವರಿಗೆ ಇಷ್ಟ ಆದ್ದರಿಂದಲೇ ದೀಪಾವಳಿಯ ದಿನ ಜನಿಸಿದ್ದಾರೆ:' ಎಂದಳು ಸೀತಾಲಕ್ಷ್ಮಿ.

ಆಗ ಶಾಸ್ತ್ರಿಗಳ ಮುಖದ ಹತ್ತಿರವೇ ಅವರ ಸೊಸೆಯ ಮುಖ ಬಂದದ್ದು ಕಾಣಿಸಿತು. ಸ್ವಲ್ಪ ಉಬ್ಬಿತ್ತು ಮುಖ— ಪೌಡರ್ ವಾಸನೆ ಮೂಗು ಒಡೆಯುವಂತಿತ್ತು. ಆ ವಾಸನೆ ಸಹಿಸಲಾರದೆ ಶಾಸ್ತ್ರಿಗಳು ಕೈ ಅಲ್ಲಾಡಿಸಿದರು.

"ನನ್ನ ಚಿನ್ನಾ! ಆಷ್ಟರೊಳಗೆ ಅಮ್ಮನೆಂದು ತಿಳಿದು ಹೋಯಿತೇ ನಿನಗೆ?" ಎಂದಳು ಸೊಸೆ ಸುಲೋಚನೆ.

ಆಗ ತಿಳಿಯಿತು ಶಾಸ್ತ್ರಿಗಳಿಗೆ; ವಿಧಿ ತನ್ನನ್ನು ಎಷ್ಟು ಹಾಸ್ಯಕ್ರೀಡು ಮಾಡಿದೆ ಎಂಬುದು. ತನ್ನಮನೆಯಲ್ಲೇ ತಾನು ತೊಟ್ಟಿಲಲ್ಲಿ ಮಲಗಿರುವುದೂ, ತನ್ನ ಸೊಸೆಗೇ ತಾನು ಮಗುವಾಗಿ ಹುಟ್ಟಿರುವುದೂ ತಿಳಿಯಬಂತು. ಬಹಳ ವ್ಯಸನವುಂಟಾಯಿತು. ಘಟ್ಟಿಯಾಗಿ ಅಳುವುದಕ್ಕಾರಂಭಿಸಿದರು. ಕೈ ಕಾಲುಗಳನ್ನು ಜೋರಾಗಿ ಒದೆಯಲಾರಂಭಿಸಿದರು.

"ಆವಮ್ಮ ನೀವು ಹೇಳಿದ್ದು ನಿಜವೇ. ಧ್ವನಿ ಕೇಳಿ. ತದ್ವತ್ ತಾ-ತಾನೇ" ಎಂದಳು ಸುಲೋಚನೆ.

ಹೊರಗಡೆಯಿಂದ ಶಾಸ್ತ್ರಿಗಳ ಮಗ ಸ್ವಾಮಿಯು ಮಾತನಾಡುವುದು ಕೇಳಿಸಿತು—"ಎಷ್ಟು ಭಗವದ್ಗೀತೆ ವ್ಯಾಖ್ಯಾನ ಮಾಡಿದರೇನು ಪುನಃ ಜನ್ಮವೆತ್ತಿರುವರಲ್ಲಾ".

ಇದನ್ನು ಕೇಳಿದೊಡನೆ ಶಾಸ್ತ್ರಿಗಳು ಮೂರ್ಛೆಹೋದರು. ಪುನಃ ಪ್ರಜ್ಞೆ ಬಂದಿತು. ಅದರೆ ಬೇಸರ ದಯದಿಂದ ಪೂರ್ವ ಸ್ಮರಣೆ ತಪ್ಪಿತ್ತು.

# * ‘ಎಲ್ಲವೂ ಅವನೇ.’

೧

ರಾಮರಾಯರು ಮೈಸೂರಿನಲ್ಲಿ ವಕೀಲರು. ಕಾಂಗ್ರೆಸ್ ಮೆಂಬರ್ ಕೂಡಾ. ತಮ್ಮ ಮಗ ನಾರಾಯಣನನ್ನು ಶಾಲೆ ಬಿಡಿಸಿ ಮನೆಯಲ್ಲೇ ತಮ್ಮ ಸಹಾಯಕ್ಕೆ ಇಟ್ಟುಕೊಂಡಿದ್ದರು. ಮನೆಯಲ್ಲೇ ಕೈಗೆ ಸಿಕ್ಕಿದ ಪುಸ್ತಕಗಳನ್ನು ಓದಿಕೊಂಡು, ತನ್ನ ವಿದ್ಯಾಭ್ಯಾಸವನ್ನು ತಾನೇ ಮಾಡಿಕೊಳ್ಳುತ್ತಿದ್ದ ನಾರಾಯಣ. ರಾಮರಾಯರ ಸಂಪಾದನೆ ಸಂಸಾರ ನಿರ್ವಹಿಸಲೂ ಸಾಲದು. ಅಂತೇ ಅವರ ಜೀವನಯಾತ್ರೆ ಸ್ವಲ್ಪ ಕಷ್ಟದಿಂದಲೇ ಸಾಗುತ್ತಿತ್ತು. ಸೀತಮ್ಮ ಅವರ ಧರ್ಮ ಪತ್ನಿ. ಅವರ ಮುದ್ದಿನ ಮಗಳು ಲಲಿತ. ಸೀತಮ್ಮನವರ ಅಣ್ಣ ರಾಜಾರಾಯರಿಗೆ ತಮ್ಮ ತಂಗಿಯಲ್ಲಿ ಬಹು ಮಮತೆ. ಅಂತೇ ತಂಗಿಯ ಮಗ ನಾರಾಯಣನ ಮದುವೆಯನ್ನು ತಾವೇ ಶ್ರಮವಹಿಸಿ, ನೆರವೇರಿಸಿದ್ದರು.

ನಾರಾಯಣನ ಮಾವನವರು ಅನುಕೂಲಸ್ಥರು. ಅವರು ಅಳಿಯನನ್ನು ಪುನಃ ಶಾಲೆಗೆ ಕಳುಹಿಸಿ ಓದಿಸತೊಡಗಿದರು. ನಾರಾಯಣನೂ ಬೇಗ ಬೇಗ ಎಲ್ಲಾ ತರಗತಿಗಳಲ್ಲಿಯೂ ತೇರ್ಗಡೆಯಾಗಿ ಮುಂದಕ್ಕೆ ಬಂದು ಮೈಸೂರಿನಲ್ಲೇ ಮೆಡಿಕಲ್ ಕಾಲೇಜಿಗೆ ಸೇರಿದ.

ಲಲಿತೆಗೆ ೧೬ ವರ್ಷವಾಗಿಹೋಯಿತು. ಇನ್ನೂ ಮದುವೆಯಾಗಲಿಲ್ಲವಲ್ಲಾ ಎಂದು ಸೀತಮ್ಮನವರಿಗೆ ಚಿಂತೆ. ಇದನ್ನರಿತ ರಾಜಾರಾಯರು ತಮ್ಮ ಮಗನಿಗೇ ಲಲಿತೆಯನ್ನು ತಂದುಕೊಳ್ಳುವ ಯೋಚನೆಮಾಡಿದರು. “ಮಗನ ಮದುವೆಗೆ ಈಗಾಗಲೇ ಏನವಸರ ? ಇನ್ನೂ ಕೆಲವು ದಿನ ನೋಡೋಣ, ಒಳ್ಳೇ ದೊಡ್ಡ ಮನುಷ್ಯರ ಮಗಳು ಬಂದರೆ ವರದಕ್ಷಿಣೆ ಸಿಕ್ಕುತ್ತೆ. ಈಗಿನ ಕಾಲದಲ್ಲಿ. ಹೆಣ್ಣಿನವರು ಬೇಕಾದಷ್ಟು ವರೋಪಚಾರ ಮಾಡುತ್ತಾರೆ ! ಸೀತಮ್ಮನ ಮಗಳನ್ನು ಮಾಡಿಕೊಂಡರೆ ಏನು ಬರುತ್ತೆ ?” ಎಂದು ಅವರ ಹೆಂಡತಿಯ ಆಕ್ಷೇಪಣೆ. ರಾಜಾರಾಯರು “ವರದಕ್ಷಿಣೆ ವರೋಪಚಾರ ಅದೆಲ್ಲಾ ಕೂಡದು.

*[ ಚಕ್ರವರ್ತಿ ರಾಜಗೋಪಾಲಾಚಾರ್ಯರ ತಮಿಳು ಕಥೆಯೊಂದರ ಅನುವಾದ ]

ಹುಡುಗಿ ಲಕ್ಷಣವಾಗಿದ್ದಾಳೆ. ಜಾತಕವೂ ಕೂಡಿದೆ. ಪಾಪ ! ಸೀತೆ ಬೇರೆ ಯಾರನ್ನು ತಾನೆ ಹುಡುಕುತ್ತಾಳೆ. ಅವರಿಗೋ ಕಷ್ಟ, ಸಾಲ ಒಂದಾಗಿ ಪೀಡಿಸುತ್ತಿವೆ. ನಾವೇ ಅವರಿಗೆ ಸಹಾಯ ಮಾಡದಿದ್ದರೆ ಬೇರೆ ಯಾರು ಮಾಡುತಾರೆ " ಎಂದು ಹೇಳಿ, ತಮ್ಮ ಮಗ ಗೋಪಾಲಕೃಷ್ಣನಿಗೆ ಲಲಿತೆಯನ್ನು ತಂದುಕೊಂಡು ವಿವಾಹವನ್ನು ನೆರವೇರಿಸಿಬಿಟ್ಟರು. ಗೋಪಾಲಕೃಷ್ಣ ಇಂಟರ್ ಪಾಸಾಗಿ, ಮದ್ರಾಸಿನಲ್ಲಿ ಒಂದು ಕಂಪೆನಿಯಲ್ಲಿ ಕೆಲಸದಲ್ಲಿದ್ದ. ಮದುವೆ ಕಳೆದ ಚೈತ್ರ ಮಾಸದಲ್ಲಿ ನೆರವೇರಿತು.

೨

ಗೋಪಾಲ ಕೃಷ್ಣನಿಗೆ ದೀಪಾವಳಿ ಅಹ್ವಾನ ಬಂದಿತು ಮಾವನವರಿಂದ. ಸರಿ ! ಒಡನೆಯೇ ಮಾವನ ಮನೆಗೆ ಹೊರಡಲು ಅಣಿಯಾದ. ಅಲ್ಲಲ್ಲೇ ತಂತಿ ಕತ್ತರಿಸುವುದೂ, ರೈಲು ಕಂಬಿ ಕೀಳುವುದೂ ನಡದೇ ಇತ್ತು. ಇದನ್ನು ಕಂಡು ಗೋಪಾಲಕೃಷ್ಣನ ಮನಸ್ಸಿನಲ್ಲಿ ಸುಖವಾಗಿ ಹೋಗಿ ಮೈಸೂರು ತಲಪುವೆನೋ ಇಲ್ಲವೋ ಎಂಬ ಭಯ. ಅದಕ್ಕೆ ಸರಿಯಾಗಿ ಹೊರಗೆ ಹೆಜ್ಜೆ ಇಡುತ್ತಿದ್ದ ಹಾಗೆ ಎದುರಿಗೆ ಒಂದು ಬೆಕ್ಕು ಅಡ್ಡಲಾಗಿ ಹಾದು ಹೋಯಿತು. " ಬೆಕ್ಕು ಅಡ್ಡ ಹೋಯಿತಲ್ಲಾ, ನಿನಗೆ ಶಕುನದಲ್ಲಿ ನಂಬಿಕೆಯಿದೆಯೇ " ಎಂದು ಅವನ ಜೊತೆಯಲ್ಲಿ ಸ್ಟೇಷನ್ನಿಗೆ ಹೋಗುತ್ತಿದ್ದ ಸ್ನೇಹಿತ ಕೇಳಿದ. "ಇಲ್ಲವಪ್ಪಾ ಇಲ್ಲ ! ಶಕುನ ಗಿಕುನವಿಲ್ಲ. ಅದೂ ಅಲ್ಲದೆ ನನಗೆ ಗೊತ್ತಿರೋ ಬೆಕ್ಕು ಇದು " ಎಂದ ಗೋಪಾಲ ಕೃಷ್ಣ. ' ಓಹೋ ಶಕುನದಲ್ಲಿದು ಬೇರೆ ಹೇಳಿದೆಯೋ; ಹಾಗಾದರೆ ಸರಿ ; ಗೊತ್ತಿರೋ ಬೆಕ್ಕು, ಗೊತ್ತಿಲ್ಲದ ಬೆಕ್ಕು " ಎಂದ ಆ ಗೆಳೆಯ.

ಇಬ್ಬರೂ ಸ್ಟೇಷನ್ ತಲಪಿದರು. ಸಾಮಾನನ್ನು ನೋಡಿಕೊಳ್ಳುವಂತೆ ಸ್ನೇಹಿತನಿಗೆ ಹೇಳಿ, ಗೋಪಾಲಕೃಷ್ಣ ಟಿಕೆಟ್ ತರಲು ಹೋದ. ಟಿಕೆಟ್ ತೆಗೆದುಕೊಳ್ಳುವ ಕಿಟಕಿಯ ಬಳಿ ವಿಪರೀತ ಗಲಾಟೆ; ಶತ್ರುಗಳ ಭಯ, ಮದರಾಸು ಬಿಟ್ಟು ಬೇರೆ ಬೇರೆ ಊರುಗಳಿಗೆ ಹೋಗುವ ಅವಸರ ಎಲ್ಲರಿಗೂ. ಗೋಪಾಲಕೃಷ್ಣ ಆ ಗುಂಪಿನಲ್ಲೇ ನುಗ್ಗಿಕೊಂಡು ಹೋಗಿ "ಮೈಸೂರಿಗೆ ಒಂದು ಟಿಕೆಟ್" ಎಂದು ಕೇಳಿದ. ಟಿಕೆಟ್ ಕೊಡುವವನು ಸ್ವಲ್ಪ ಎಣಿಕೆ ಮಾಡಿ ನೋಡಿ ನಂತರ " ಈಗ ಬೆಂಗಳೂರಿಗೆ ತೆಗೆದುಕೊಳ್ಳಿ, ಅಲ್ಲಿಂದ ಮೈಸೂರಿಗೆ ಹೋಗುವಿರಂತೆ "

ಎಂದು ಹೇಳಿದ. ಗೋಪಾಲಕೃಷ್ಣ ಹಾಗೇ ಆಗಲೆಂದು ಬೆಂಗಳೂರಿಗೇ ಟಿಕೇಟು ಕೊಡೀ ಎಂದ.

" ನಾಲ್ಕು ರೂಪಾಯಿ ಹನ್ನೆರಡು ಆಣೆ " ಎಂದ ಟಿಕೇಟ್ ಕೊಡುವವನು. ಗೋಪಾಲ ಕೃಷ್ಣ ದುಡ್ಡು ತೆಗೆದುಕೊಳ್ಳಲು ಜೇಬಿಗೆ ಕೈ ಹಾಕಿದನು. ಅಲ್ಲೇನಿದೆ ? ಜೇಬಿನಲ್ಲಿ ದೊಡ್ಡ ತೂತು. ದುಡ್ಡಿನ ಚೀಲ ಮಾಯವಾಗಿದೆ. ಗಾಬರಿಯಿಂದ ಅಕ್ಕ ಪಕ್ಕ ತಿರುಗಿ ನೋಡಿದ. ಪಕ್ಕದಲ್ಲಿದ್ದವರೊಬ್ಬರು, " ಏನು ಸ್ವಾಮಿ ! ಹಣದ ಚೀಲ ಧಾರೆಯೆರೆದು ಬಿಟ್ಟಿರೋ ಹಾಗಿದೆ ? ಗುಂಪಿನಲ್ಲಿ ಬಹಳ ಜಾಗ್ರತೆಯಿಂದಿರಬೇಕು. ಕಳ್ಳರು ಜೇಬನ್ನೇ ಕತ್ತರಿಸಿ ಬಿಟ್ಟಿದ್ದಾರೆ " ಎಂದರು. ಮತ್ತೊಬ್ಬರು, " ಕೆಳಗೆ ಧೊಪ್ಪೆಂದು ಬಿದ್ದ ಶಬ್ದವಾದ ಹಾಗಾಯಿತು ನೋಡಿ " ಎಂದರು. ಇನ್ನೊಬ್ಬರು, " ಅಯ್ಯೋ ಇವರು ಯಾವ ಊರಿಗೂ ಹೋಗಲು ಬಂದ ಹಾಗೆ ಕಾಣುವುದಿಲ್ಲ ಸುಮ್ಮನೆ ತಮಾಷೆಗಾಗಿ ಈ ಗುಂಪಿನಲ್ಲಿ ನುಗ್ಗಿರಬೇಕು ಅಷ್ಟೆ " ಎಂದು ಹಾಸ್ಯಮಾಡಿದರು. ಬೇರೊಬ್ಬರು, ' ಇವೆಲ್ಲಾ ಇರಲಿ ಮೊದಲು ಕಳ್ಳನನ್ನು ಹಿಡಿಯಿರಿ ' ಎಂದು ಕೂಗಿಕೊಂಡರು.

ಯಾರೂ ಯಾರನ್ನೂ ಹಿಡಿಯಲಿಲ್ಲ. ಕೆಳಗೆ ಬಿದ್ದಿದ್ದ ತನ್ನ ಬೀಗದ ಕೈ ಗೊಂಚಲನ್ನು ತೆಗೆದುಕೊಂಡು, ಗೋಪಾಲಕೃಷ್ಣ ತನ್ನ ಹಣದ ಚೀಲವೂ ಕೆಳಗೆ ಬಿದ್ದಿರಬಹುದೆಂಬ ಆಶೆಯಿಂದ ಹುಡುಕಿ ನೋಡಿದ. ಆದರೆ ಅದು ಹೇಗೆ ಸಿಕ್ಕೀತು ? ಇಷ್ಟರಲ್ಲಿ ಎಷ್ಟು ದೂರ ಹೋಗಿತ್ತೋ ಅದು ! ಮೊದಲೇ ಮದ್ರಾಸು ! ಕಳ್ಳತನದ ಬಗ್ಗೆ ಹೇಳಬೇಕೇ ? ಗೋಪಾಲಕೃಷ್ಣ ತನ್ನ ಸ್ನೇಹಿತನ ಬಳಿಗೆ ಹೋಗಿ ಅವನಲ್ಲೇನಾದರೂ ಹಣವಿದೆಯೋ ಎಂದು ಕೇಳಿದನು. " ಏನು ಸಮಾಚಾರ ? ಹಣದ ಚೀಲ ಧಾರೆಯೆರೆದು ಕೊಟ್ಟೆಯೋ ? " ಎಂದು ಆ ಊರಿನ ಭಾಷೆಯಲ್ಲೇ ಹಾಸ್ಯಮಾಡಿದ. ಗೋಪಾಲಕೃಷ್ಣ ನಡೆದ ಕಥೆಯನ್ನೆಲ್ಲಾ ವಿವರಿಸಿದ.

" ನೋಡಿದೆಯಾ ! ಬೆಕ್ಕು ಅಡ್ಡ ಬಂದ ಫಲ ! ಈ ಜುಬ್ಬ ಹಾಕಿಕೊಳ್ಳಬೇಡ. ಕೋಟು ಹಾಕಿಕೊ ಎಂದು ಎಷ್ಟು ಸಲ ಹೇಳಿದೆ. ನೀ ಕೇಳಿದೆಯಾ? " ಎಂದು ಸ್ನೇಹಿತ ಮೂದಲಿಸಿದ.

"ಅಯ್ಯೋ ಇರಲಿ, ಸದ್ಯಕ್ಕೆ ನಿನ್ನ ಹತ್ತಿರ ಹಣವೇನಾದರೂ ಇದೆ ಯೇನೋ?" "ನನ್ನ ಹತ್ತಿರ ಎರಡು ರೂಪಾಯಿಯಿದೆ. ಅದೆಲ್ಲಿ ಸಾಲುತ್ತೆ?"

ಇಬ್ಬರೂ ಹಿಂದಿರುಗಿ ರೂಮಿಗೆ ಹೋಗಿ ಹೋಟಲಿನಿಂದ ಊಟ ತರಿಸಿ ಊಟಮಾಡಿದರು. ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಶಂಕರನು (ಸ್ನೇಹಿತನ ಹೆಸರು) ಇದ್ದಕ್ಕಿದ್ದಂತೆಯೇ ಘಟ್ಟಿಯಾಗಿ ನಕ್ಕು "ಗೋಪಾಲ್ ಹೇಗಿದ್ದರೂ ನಿನಗೆ ಈ ಮದುವೆ ಇಷ್ಟವಿರಲಿಲ್ಲವಲ್ಲಾ! ಅಳಿಯ ಕೋಪಿಸಿ ಕೊಂಡು ದೀಪಾವಳಿಗೆ ಬರಲಿಲ್ಲವೆಂದುಕೊಳ್ಳುತ್ತಾರೆ ನಿನ್ನ ಮಾವನವರು. ಹಾಗೆಯೇ ತಿಳಿದುಕೊಳ್ಳಲಿ ಬಿಡೋ" ಎಂದ.

"ಅದರಿಂದೇನೂ ಸುಖವಿಲ್ಲೋ. ಪಾಪ! ಲಲಿತ ನಾ ಹೋಗದಿದ್ದರೆ ಎಷ್ಟು ಯೋಚನೆ ಮಾಡುತ್ತಾಳೋ ಏನೋ ಎಂದು ನಿಟ್ಟುಸಿರು ಬಿಟ್ಟು ಹೇಳಿದ ಗೋಪಾಲಕೃಷ್ಣ.

"ಓಹೋ! ಮದುವೆ ಇಷ್ಟವಿರಲಿಲ್ಲಂತ ಹೇಳಿದ್ದು ಬರೀ ಬುರುಡೆ. ಹೋಗಲಿ ಹಬ್ಬದ ಮಾರನೇ ದಿನ ಹೋಗು. ಹಬ್ಬಕ್ಕೇಕೆ ಬರಲಿಲ್ಲಾ ಅಂತ ಕೇಳಿದರೆ ಹಣದ ಚೀಲ ಕಳೆದುಕೊಂಡ ಕತೆ ಹೇಳು. ಎಲ್ಲರೂ ನಗುತ್ತಾರೆ ನಿನ್ನ ಮಂಕುತನ ಕಂಡು" ಎಂದ ಶಂಕರ. ಗೋಪಾಲಕೃಷ್ಣನಿಗೂ ಇದೇ ನ್ಯಾಯವಾಗಿ ತೋರಿದರಿಂದ ಮಾರನೇ ದಿನ ಹೊರಡುವುದೆಂದು ತೀರ್ಮಾನಿಸಿದ.

೩

ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ವಿದ್ಯಾರ್ಥಿಗಳು ಮುಷ್ಕರ ಹೂಡಿದ್ದರು. ಒಂದು ದಿನ ಇವರ ಗಲಾಟೆ ಜೋರಾಗಿ ಪೋಲೀಸಿನವರು ಲಾಠಿ ಪ್ರಯೋಗಿಸಿದ್ದಲ್ಲದೆ ಗುಂಡು ಹಾರಿಸಿ, ಕೆಲವರಿಗೆ ಗಾಯಗಳೂ ಆಗಿದ್ದವು. ನಾರಾಯಣನು ಮೊದಮೊದಲು "ಈಗ ನಡೆಯುತ್ತಿರುವುದು ಕಾಂಗ್ರೆಸ್ ನೀತಿ, ಅಹಿಂಸೆಗೆ ವಿರೋಧವಾದ ಚಳುವಳಿ. ಇದೆಲ್ಲಾ ಮಾಡಬಾರದು" ಎಂದು ಹೇಳುತ್ತಿದ್ದ. ಕೊನೆಗೆ "ಅಹಿಂಸೆಯೆಂದು ಕುಳಿತರೆ ಆಗದು. ಇದು ಕೊನೆಯ ಯುದ್ಧ. ಭಗವದ್ಗೀತೆಯೇ ಸರಿ. ಮಾಡು ಅಥವಾ ಮಡಿ" ಎಂದು ಹೇಳ

ತೊಡಗಿ ಒಂದು ಗುಂಪಿನ ಮುಂದಾಳಾಗಿ ನಿಂತು, 'ಬರಿಯ ಶಾಲೆ ತ್ಯಜಿಸುವು ದರಿಂದುಪಯೋಗವಿಲ್ಲ. ಇನ್ನೇನಾದರೂ ದೊಡ್ಡ ಕೆಲಸಗಳನ್ನು ಮಾಡ ಬೇಕು' ಎಂದು ಎಲ್ಲರಿಗೂ ಬೋಧಿಸುತ್ತಾ ಬಂದ. ಬೇರೆ ಊರುಗಳಿಂದಲೂ ಕೆಲವರು ಬಂದು ಸೇರಿಕೊಂಡರು. ಅವರು ತಮ್ಮ ಊರುಗಳಲ್ಲಿ ಹಾಗೆ ನಡೆ ಯಿತು, ಹೀಗೆ ನಡೆಯಿತು ಎಂದು ಇದ್ದದ್ದು ಇಲ್ಲದ್ದು ಎಲ್ಲವನ್ನೂ ಸೇರಿಸಿ ಹೇಳಿಕೊಂಡರು. ಅದನ್ನೆಲ್ಲ ಕೇಳಿ, ನಾರಾಯಣನ ಗುಂಪಿನವರಿಗೆ ಬಹು ಉತ್ಸಾಹವುಂಟಾಯಿತು. ಸರಿ ! ಎಲ್ಲರೂ ಸೇರಿ ಬೆಂಗಳೂರಿಗೆ ಹೋಗಿ, ಅಲ್ಲಿನ ಹುಡುಗರೊಡನೆ ಸೇರಿಕೊಂಡರು. ಅಲ್ಲಿಂದ ಹತ್ತಿರದಲ್ಲಿಯೇ ಇದ್ದ ಒಂದು ಹಳ್ಳಿಗೆ ಹೋಗಿ ತಂಗಿದ್ದು ಮಧ್ಯ ರಾತ್ರಿಯಲ್ಲಿ ರೈಲು ಕಂಬಿ ಕಿತ್ತುಹಾಕಬೇ ಕೆಂದು ತೀರ್ಮಾನಿಸಿಕೊಂಡರು. ಹಾಗೆ ಮಾಡಿಯೇ ಬಿಟ್ಟರು. ಕೆಲಸ ಪೂರೈ ಸಿಕೊಂಡು ಹಿಂದಿರುಗಿ ಬೆಂಗಳೂರಿಗೆ ಬಂದು ಸೇರಿಕೊಂಡರು.

ಆ ದಿನ ದೀಪಾವಳಿ ಬೆಂಗಳೂರು ಮೆಯಿಲ್‌ಗಾಡಿ ಮಗುಚಿಕೊಂಡಿ ತೆಂದೂ ರೈಲುಗಾರ್ಡ್ ಮೊದಲಾಗಿ ೧೨ ಜನ ಸತ್ತುಹೋದರೆಂದೂ ಅನೇಕ ಜನರಿಗೆ ಗಾಯಗಳಾಗಿವೆಯೆಂದೂ ಬೆಂಗಳೂರಿಗೆ ಸಮಾಚಾರ ಬಂದಿತು. ಕೆಲ ವರು ಹನ್ನೆರಡೇ ಜನವೇ ಸತ್ತಿರುವುದು ? ಇರಲಾರದು. ಇನ್ನೂ ಹೆಚ್ಚು ಮಂದಿ ಸತ್ತಿರಬೇಕು ; ಸರ್ಕಾರದವರು ನಿಜ ಹೇಳುವುದಿಲ್ಲ ; ಎಂದು ಆಡಿಕೊಂ ಡರು. ನಾರಾಯಣನೂ ಅವನ ಒಡನಾಡಿಗಳೂ ಇನ್ನೇನು ಸ್ವರಾಜ್ಯವೇ ಸಿಕ್ಕಿ ಬಿಟ್ಟಿತೆಂದು ಹೆಮ್ಮೆಪಟ್ಟರು. ಇದೆಲ್ಲಾ ೧೯೪೨ ನೇ ವರ್ಷದ ಲೀಲಾವಿನೋ ದಗಳು.

೬

ರಾಮರಾಯರೂ ಸೀತಮ್ಮನವರೂ ದೀಪಾವಳಿಗೆ ಅಳಿಯ ಬರುವನೆಂದು ಎಲ್ಲಾ ಏರ್ಪಾಡುಗಳನ್ನೂ ಬಹು ಸಂಭ್ರಮದಿಂದ ಮಾಡಿಕೊಂಡಿದ್ದರು. ಬೀಗಿ ತ್ತಿಗೆ ಮನಸ್ಸಿಲ್ಲದೆ ಬೀಗನು ಮದುವೆ ನೆರವೇರಿಸಿದ್ದರಿಂದ ಈಗ ಚೆನ್ನಾಗಿ ಅಳಿಯ ನಿಗೆ ಉಪಚಾರಮಾಡದಿದ್ದರೆ ಹೇಗೋ ಏನೋ ಎಂಬ ಭಯದಿಂದ ಖರ್ಚನ್ನು ಗಮನಿಸದೆ ಎಲ್ಲಾ ಏರ್ಪಾಡು ಮಾಡಿದ್ದರು. ಸಾಲಮಾಡಿಯೇ ಇದೆಲ್ಲಾ ನಡೆಯಿತೆಂದು ಹೇಳಬೇಕಾದ್ದೇ ಇಲ್ಲ. ಲಲಿತೆ ದೀಪಾವಳಿ ಯಾವಾಗ ಬರುತ್ತ

ದೆಯೋ, ಗಂಡ ಯಾವಾಗ ಬರುತ್ತಾನೋ ಎಂದು ಎದುರು ನೋಡುತ್ತಿದ್ದಳು. ಪತಿದೇವನು ಬರುವ ಸಮಯದಲ್ಲಿ ಎಲ್ಲಿ ನಿಂತುಕೊಂಡು ಅವನನ್ನು ನೋಡ ಬೇಕು, ಯಾವ ಸೀರೆಯುಟ್ಟುಕೊಳ್ಳಬೇಕು, ಹೂವು ಹೇಗೆ ಮುಡಿದುಕೊಳ್ಳು ವುದು, ಹಣೆಯಲ್ಲಿ ಸಾದು ಇಟ್ಟುಕೊಳ್ಳುವುದೋ ಅಥವಾ ಕುಂಕುಮವೋ, ಹೇಗೆ ಅಲಂಕಾರಮಾಡಿಕೊಂಡರೆ ಗಂಡನಿಗೆ ಮೆಚ್ಚಿಗೆಯಾಗುತ್ತದೆ ; ಹೀಗೆಲ್ಲಾ ಯೋಚಿಸುವುದರಲ್ಲೇ ಲಲಿತೆಗೆ ಹೊತ್ತು ಕಳೆಯುತ್ತಿತ್ತು.

ದೀಪಾವಳಿಗೆ ಹಿಂದಿನ ದಿನವೇ ಅಳಿಯ ಬರುತ್ತಾನೆಂದು ನಿರೀಕ್ಷಿಸಿದ್ದರು. ಆದರೆ ಮೊದಲು ಬರಲು ಸಾಧ್ಯವಾಗಲಿಲ್ಲವೆಂದೂ ದೀಪಾವಳಿ ದಿನವೇ ಬರುವು ದಾಗಿಯೂ ಗೋಪಾಲಕೃಷ್ಣನು ಎಕ್ಸ್‌ಪ್ರೆಸ್ ಟೆಲಿಗ್ರಾಂ ಕಳುಹಿಸಿದ್ದು ಬಂತು. ಅದನ್ನು ಓದಿಕೊಂಡು ಲಲಿತೆ ಮೊದಲು ದಿನ ಬರಲಿಲ್ಲವೆಂದು ನಿಟ್ಟುಸಿರು ಬಿಟ್ಟಳು.

" ರಜಾ ದೊರೆತಿರಲಾರದು. ಅದಕ್ಕೇ ಈ ದಿನ ಬರಲಿಲ್ಲ " ಎಂದರು ರಾಮರಾಯರು.

ಕೆಲಸದಲ್ಲಿರುವವರಿಗೆ ರಜಾ ದೊರಕುವುದು ಕಷ್ಟವೆಂದು ಕೆಲವರು ಆಡಿ ಕೊಳ್ಳುತ್ತಿದ್ದುದನ್ನು ಸೀತಮ್ಮನವರು ಕೇಳಿದ್ದರು. ಈಗ ತಮ್ಮ ಅಳಿಯನಿಗೆ ರಜಾ ಸಿಕ್ಕಲಿಲ್ಲವೆಂಬುದೇ ಅವರಿಗೆ ಒಂದು ವಿಧವಾದ ದೊಡ್ಡಸ್ತಿಕೆಯಾಯಿತು. ಅಳಿಯನು ಕೆಲಸದಲ್ಲಿರುವುದೇ ಅವರಿಗೆ ಹೆಮ್ಮೆ.

ಮಾರನೆ ದಿನ ರಾಮರಾಯರು ಸ್ಟೇಷನ್ನಿಗೆ ಹೋದರು. ಅಳಿಯ ಬರು ವುದಕ್ಕೆ ಬದಲು, ರೈಲು ಬಿದ್ದುಬಿಟ್ಟು ಕೆಲವರು ಸತ್ತದ್ದೂ, ಕೆಲವರು ಘಾಯ ಗೊಂಡು ಆಸ್ಪತ್ರೆಗೆ ಸಾಗಿಸಲ್ಪಟ್ಟದ್ದೂ ಗೊತ್ತಾಯಿತು. ರಾಯರ ಚಿಂತಾಕುಲ ರಾಗಿ ಮನೆಗೆ ಹಿಂತಿರುಗಿದರು.

೫

ರಾಮರಾಯರು ಸಮಾಚಾರ ತಿಳಿಸಿದೊಡನೆಯೆ ಸೀತಮ್ಮನವರು ಅಯ್ಯೋ ! ಎಂದು ಕೂಗಿಕೊಂಡು ಅತ್ತರು. ಈ ಹಾಳು ನಾರಾಯಣ ಕೂಡ ಆ ದಿನದಿಂದ ಮನೆ ಸೇರಿಲ್ಲ ಎಂದು ಗೋಳಾಡಿದರು.

" ಯಾರಿದ್ದೇನು ಮಾಡುವರು ? " ಎಂದು ಬದಲಿತ್ತರು ರಾಮರಾಯರು.

" ಇದೆಲ್ಲಾ ಆ ಹಾಳು ಕಾಂಗ್ರೆಸ್ಸಿನವರ ಕೆಲಸ. ದರಿದ್ರ ಸ್ವರಾಜ್ಯ, ಯಾರಿಗೆ ಬೇಕೋ " ಎಂದರು ಸಂಕಟಪಡುತ್ತಾ ಸೀತಮ್ಮನವರು.

" ಇಂತಹ ತುಚ್ಛವಾದ ಕೆಲಸಗಳನ್ನೆಲ್ಲಾ ಕಾಂಗ್ರೆಸ್ಸಿನವರು ಎಂದಿಗೂ ಮಾಡರು. ಯಾರೋ ಪೋಲೀ ಹುಡುಗರ ಕೆಲಸವಿರಬೇಕು ಇದು '' ಎಂದರು ರಾಮರಾಯರು.

" ಯಾರಾದರೂ ಸರಿಯೆ. ಅಂತೂ ನನ್ನ ಹೊಟ್ಟೆಗೆ ಬೆಂಕಿ ಇಟ್ಟು ಬಿಟರಲ್ಲಾ '' ಎಂದು ಸೀತಮ್ಮನವರು ಗೋಳಾಡಿದರು.

ಆ ದಿನವೆಲ್ಲಾ ಬೇರೆ ಯಾವ ಸಮಾಚಾರವೂ ತಿಳಿಯಲಿಲ್ಲ. ವೃತ್ತ ಪತ್ರಿಕೆಗಳಲ್ಲಿ ಯಾವ ವಿಷಯವೂ ವಿಶದವಾಗಿ ವರದಿಯಾಗಿರಲಿಲ್ಲ. ಹೆಣಗಳನ್ನೆಲ್ಲಾ ಬೆಂಗಳೂರಿಗೆ ತೆಗೆದುಕೊಂಡು ಹೋಗಿ ಆಸ್ಪತ್ರೆಯಲ್ಲಿ ವಿಚಾರಣೆಗಾಗಿ ಇಟ್ಟಿರುವುದಾಗಿ ತಿಳಿಯಿತು. ಆದರೆ ಗೋಪಾಲಕೃಷ್ಣ ಬರಲಿಲ್ಲ. ಬೆಂಗಳೂರಿಗೆ ಹೋಗಿ ದೇಹವನ್ನಾದರೂ ಒಂದು ಸಲ ಕಣ್ಣಲ್ಲಿ ನೋಡಿ ಬನ್ನಿ ಎಂದರು ಸೀತಮ್ಮ ಅಳುತ್ತಾ. ದೇಹವೆಂಬ ಮಾತು ಕಿವಿಯಲ್ಲಿ ಬೀಳುತ್ತಲೇ ಹೋ ಎಂದು ತಲೆ ಚಚ್ಚಿಕೊಂಡು ಅಳುವುದಕ್ಕಾರಂಭಿಸಿದಳು ಲಲಿತೆ.

ಮಾರನೆ ದಿನ ಬೆಳಿಗ್ಗೆ ಒಂದು ಟಾಂಗಾ ಗಾಡಿ ಮನೆಯ ಮುಂದೆ ಬಂದು ನಿಂತ ಸದ್ದಾಯಿತು. ಒಡನೆಯೆ ಲಲಿತೆಯೂ ಸೀತಮ್ಮನವರೂ ಹೊರಕ್ಕೋಡಿ ಬಂದರು. ಅಳಿಯನನ್ನು ಕಂಡ ಒಡನೆಯೇ ಸೀತಮ್ಮನವರು ತಬ್ಬಿಕೊಂಡು, ' ನನ್ನ ಮಗನೇ ಬದುಕಿ ಬಂದೆಯಾ ' ಎಂದು ಆನಂದದಿಂದ ಅತ್ತರು.

" ಆ ತರಹ ಏನೂ ನಮಗೆ ಕೆಡುಕಾಗುವುದಿಲ್ಲ. ಜಾತಕದಲ್ಲಿ ಯಾವ ದೋಷವೂ ಇರಲಿಲ್ಲವಾದ್ದರಿಂದ ನಾನು ಧೈರ್ಯವಾಗಿದ್ದೆ '' ಎಂದರು ರಾಮರಾಯರು ಸಂತೋಷದಿಂದ.

ಟಾಂಗಾವವನು ಸಾಮಾನುಗಳನ್ನು ತಂದಿಟ್ಟ. ಅವನಿಗೆ ಕೊಡಬೇಕಾದ ಬಾಡಿಗೆಯನ್ನು ಲಲಿತೆಯೆ ವಿಚಾರಿಸಿ ಕೊಟ್ಟು ಕಳುಹಿಸಿದಳು. ಹೊಸ ಸೀರೆ ರವಿಕೆ, ಹೂವು, ಸಾದು ಎಲ್ಲ ಅಲಂಕಾರಗಳನ್ನೂ ಮರೆತು ಸ್ವಲ್ಪವೂ ಸಂಕೋಚ

ಪಡದೆ ಗಂಡನೆದುರಿಗೆ ಓಡಾಡಿಕೊಂಡಿದ್ದಳು. ಗೋಪಾಲಕೃಷ್ಣನೂ ತನ್ನ ಕಥೆ ಹೇಳಿದ.

" ಆ ಹಣದ ಚೀಲ ಕದ್ದ ಕಳ್ಳ ನೂರು ಕಾಲ ಬದುಕಿರಲಿ. ಅವನು ಆ ದಿನ ನಿನ್ನ ಹಣ ಕದಿಯದಿದ್ದರೆ, ನೀನು ರೈಲು ಹತ್ತಿ ಬಿಡುತ್ತಿದ್ದೆಯಲ್ಲಾ ! ಜಾತಕ ಹೇಗಿದ್ದರೇನು, ಆ ಕಳ್ಳನೇ ನನ್ನ ಮಗಳ ಮಾಂಗಲ್ಯ ಕಾಪಾಡಿದವನು " ಎಂದರು ಸೀತಮ್ಮ. "ಆ ಬೆಕ್ಕಿಗೂ ಅಮ್ಮ ಆಶೀರ್ವಾದ ಮಾಡಬೇಕು " ಎಂದಳು ಲಲಿತೆ ತನ್ನ ಮಾಂಗಲ್ಯವನ್ನು ಕೈಯಲ್ಲಲ್ಲಾಡಿಸುತ್ತಾ. ' ಪಾಪ ! ಆ ಬೆಕ್ಕೇನು ಮಾಡಿತು ? ಅಡ್ಡಲಾಗಿ ಹೋದರೆ ಈಗಿನ ಕಾಲದವರು ಶಾಸ್ತ್ರಗಳಲ್ಲಿ ನಂಬಿಕೆಯಿಟ್ಟು ರೈಲಿಗೆ ಹೋಗದೆ ಹಿಂತಿರುಗುತ್ತಾರೆಯೋ ಇಲ್ಲವೋ ನೋಡೋಣ ಎಂದುಕೊಂಡಿತ್ತು. ಅದರಲ್ಲಿ ನಂಬಿಕೆಯಿಟ್ಟು ಹಾಗೆಯೇ ಹಿಂತಿರುಗಿದ್ದರೆ ಹಣವೂ ಉಳಿಯುತ್ತಿತ್ತು, ವಿಪತ್ತೂ ಇಲ್ಲದಿರುತ್ತಿತ್ತು. ಬೆಕ್ಕೂ, ಕಳ್ಳ ಎಲ್ಲಾ ಅವನೇ ಆ ಬೆಣ್ಣೆಗಳ್ಳ ಕೃಷ್ಣ '' ಎಂದರು ಸೀತಮ್ಮ.

' ಹಾಗಾದರೆ ಸರಿ ! ಮುಂದಿನ ವರ್ಷ ದೀಪಾವಳಿ ಹಬ್ಬಕ್ಕೆ ಬರುವಾಗ ಬೆಕ್ಕು ಅಡ್ಡ ಬಂದರೆ ಪ್ರಯಾಣ ಮಾಡುವುದೇ ಇಲ್ಲ ' ಎಂದ ಗೋಪಾಲಕೃಷ್ಣ ಹೆಂಡತಿ ಮುಖ ನೋಡಿ ನಗುತ್ತಾ.

' ಹಾಗೆಲ್ಲಾ ಅಪಶಕುನ ನುಡಿಯಬೇಡ. ಕಾಫಿ ಕುಡಿದು ಬಿಟ್ಟು ಎಣ್ಣೆ ನೀರು ಹಾಕಿಕೋ ' ಎಂದರು ಸೀತಮ್ಮನವರು.

ಲಲಿತೆ ಜಿಗರಿ ಹುಲ್ಲೆಯಂತೆ ಓಡಿದಳು ಅಡಿಗೆಯ ಮನೆಗೆ. ಗಂಡನಿಗೆ ಸ್ಪೆಷಲ್ ಕಾಫೀ ತರುವುದಕ್ಕಾಗಿ.

---

# * ನೀನೇ ಭವಾನಿ

## ೧

ರಾತ್ರಿ ಒಂಭತ್ತು ಘಂಟೆ. ಆಕಾಶದಲ್ಲಿ ಕಾರ್ಮೋಡ ಕವಿದುಕೊಂಡಿದ್ದವು. ಮಳೆಯೂ ಸ್ವಲ್ಪ ಸ್ವಲ್ಪ ತೂರಿಕೊಂಡಿತ್ತು. ಬೀದಿಯ ದೀಪಗಳೂ ಮಂಕಾಗಿದ್ದವು. ಆಕಾಶವನ್ನು ನೋಡಿದರೆ ಯಾವುದೋ ದುಃಖದಿಂದ ಕಣ್ಣೀರು ಸುರಿಸುವಂತೆ ತೋರುತ್ತಿತ್ತು. ಇದನ್ನು ನೋಡಿ ಸಹಿಸಲಾರದೆ ಮನೆಯೊಳಕ್ಕೆ ಬಂದು ಬಿಟ್ಟೆ. ನನ್ನ ಮನಸ್ಸೂ ಶೋಕದಿಂದಲೇ ಕೂಡಿದ್ದಿತು. ಗಾಳಿ ಒಳಕ್ಕೆ ನುಗ್ಗಿ ದೀಪವನ್ನು ಆರಿಸುವುದಲ್ಲಾ ಎಂದು ಕಿಟಕಿಗಳನ್ನೆಲ್ಲಾ ಹಾಕಿದೆ. ದೀಪ ದೊಡ್ಡದು ಮಾಡಿ, ಮನಸ್ಸಿನ ಶೋಕವನ್ನು ಮರೆಯಲೋಸುಗ ಒಂದು ಕಥೆ ಪುಸ್ತಕ ತೆಗೆದುಕೊಂಡು ಓದಲನುವಾದೆ.

ಶೋಕ ಶೋಕ ಎಂದು ಹೇಳುತ್ತೇನಲ್ಲ ಕಾರಣವೇನೆಂದು ವಾಚಕರು ಕೇಳಬಹುದು. ಈ ಪ್ರಪಂಚದಲ್ಲಿ ದುಃಖಕ್ಕೆ ಕಡಿಮೆಯೇ, ಸಾಲದುದಕ್ಕೆ ಸಾಯಂಕಾಲ ಪತ್ರಿಕೆಯಲ್ಲಿ ಬಂದ ಸಮಾಚಾರ ನನ್ನ ಮನಸ್ಸಿನಲ್ಲಿದ್ದ ಅಲ್ಪ ಸ್ವಲ್ಪ ಉತ್ಸಾಹವನ್ನೂ ಹೋಗಲಾಡಿಸಿ ಬಿಟ್ಟಿತು. ಅದು ತರೀಕೆರೆಯಲ್ಲಿ ಆದ ರೈಲು ಅನಾಹುತದ ಸಮಾಚಾರ. ನಿನ್ನೆ ರಾತ್ರಿ ಅನಾಹುತವಾಗಿ ರೈಲು ಮೊಗಚಿಕೊಂಡು ಅನೇಕರಿಗೆ ವಿಪತ್ತೊದಗಿತ್ತು. ಇತರ ವಿಷಯಗಳು ಇನ್ನೂ ಚೆನ್ನಾಗಿ ತಿಳಿದಿರಲಿಲ್ಲ. ಅನೇಕರು ಅನೇಕ ವಿಧವಾಗಿ ಮಾತನಾಡಿಕೊಳ್ಳುತ್ತಿದ್ದರು. ಸತ್ತವರ ಸಂಖ್ಯೆಗಂತೂ ಲೆಕ್ಕವೇ ಇಲ್ಲ. ನೂರು, ಇನ್ನೂರು ಮಂದಿ ಸತ್ತಿದಾರೆಂದು ಕೇಳಿದಾಗ ಕೂಡ ನನ್ನ ಮನಸ್ಸಿಗೆ ಅಷ್ಟು ವ್ಯಥೆಯಾಗಲಿಲ್ಲ. ಆದರೆ ಪತ್ರಿಕೆಯಲ್ಲಿ ಬಂದ ಸತ್ತವರ ಹೆಸರುಗಳನ್ನು ಓದಿದಾಗ-ಅದರಲ್ಲೂ-ಗೊತ್ತಾದವರ ಹೆಸರೊಂದು ಕಾಣುತ್ತಲೂ-ರೈಲು ಗಾಡಿಯು ನನ್ನ ಮೇಲೇ ಬಿದ್ದಂತೆ ತೋರಿತು.

ಅರಸೀಕೆರೆ ಶೇಷಾಚಾರ್ಯರನ್ನು ಕಂಡು ಕೇಳದವರೇ ಇಲ್ಲ. ಅವರು ಕಥೆಗಳನ್ನು ಹೇಳುವುದರಲ್ಲಿ ಹೆಸರುವಾಸಿ. ಸತ್ತವರ ಹೆಸರುಗಳ ಪೈಕಿ ಶೇಷಾ

---

* [ ಕಲ್ಕಿಯವರ ತಮಿಳು ಕತೆಯೊಂದರ ಅನುವಾದ ]

ಚಾರ್ಯರ ಹೆಸರನ್ನು ಕಂಡಿದ್ದರಿಂದಲೇ ನನಗಷ್ಟು ಮನೋವೇದನೆಯುಂಟಾಯಿತು. ಅವರು ನನ್ನ ಆಪ್ತಸ್ನೇಹಿತರು. ಅವರ ಮರಣವಾರ್ತೆಯನ್ನು ಕೇಳಿ, ಭಗವಂತನು ನನ್ನನ್ನು ಏಕೆ ಈ ಪ್ರಪಂಚದಲ್ಲಿ ಉಳಿಸಿ ಬಿಟ್ಟನೋ ಎಂದು ಬಹು ವ್ಯಥೆಯಾಯಿತು. ಯಾವುದಾದರೂ ದೇಶದಲ್ಲಿ ಹತ್ತಿಪ್ಪತ್ತು ಸಾವಿರ ಮಂದಿ ಸತ್ತರೆಂಬ ಸುದ್ದಿ ನಮ್ಮನ್ನು ಅಷ್ಟಾಗಿ ಕೆಣಕುವುದಿಲ್ಲ. ಆದರೆ ನಮಗೆ ತಿಳಿದವರೊಬ್ಬರ ಮರಣವಾರ್ತೆ ನಮ್ಮನ್ನು ಏನೋ ಮಾಡಿಬಿಡುತ್ತದೆ.

"ಆಹಾ ! ಶೇಷಾಚಾರ್ಯರಿಗೆ ಇಂತಹ ಸಾವೇ ? ಎಂತಹ ಮನುಷ್ಯ ? ಎಷ್ಟು ದೇಶಭಕ್ತಿ ? ಕಂಡವರೆಂದರೆ ಎಷ್ಟು ಅಭಿಮಾನ ? ಎಂತಹ ನಡತೆ ? ಎಷ್ಟು ರಸಿಕತನ ? " ಹೀಗೆಲ್ಲಾ ಯೋಚಿಸುತ್ತಿರುವಾಗ ಬಾಗಿಲಲ್ಲಿ ಕುದುರೆ ಬಂಡಿಯೊಂದು ಬಂದು ನಿಂತ ಶಬ್ದವಾಯಿತು.

"ಇಷ್ಟು ಹೊತ್ತಿನಲ್ಲಿ ಬರುವವರು ಯಾರು ? " ಎಂದುಕೊಂಡೆ. ನನ್ನ ಮನಸ್ಥಿತಿಯಲ್ಲಿ ನನಗೆ ಯಾರನ್ನಾದರೂ ನೋಡುವುದಕ್ಕಾಗಲೀ, ಮಾತನಾಡುವುದಕ್ಕಾಗಲೀ ಮನಸ್ಸಿರಲಿಲ್ಲ. ಮೂರು ನಿಮಿಷಕ್ಕೆ ಬಾಗಿಲು ತೆರೆಯಿತು. ಅಡಾಲ್ಫ್ ಹಿಟ್ಲರೋ, ಜನರಲ್ ಟೋಜೋವೊ ಬಾಗಿಲ ಹತ್ತಿರ ನಿಂತಿದ್ದಗೆ ಕೂಡ ನನಗಷ್ಟು ದಿಗಿಲುಂಟಾಗುತ್ತಿರಲಿಲ್ಲ. ಅಲ್ಲಿ ನಿಂತಿದ್ದವರು ಬೇರೆ ಯಾರೂ ಅಲ್ಲ. ಸಾಕ್ಷಾತ್ ಶೇಷಾಚಾರ್ಯರೆ !

"ಭಯ ಪಡಬೇಡ. ನಾನೇ ಬಂದಿದ್ದೇನೆ ನನ್ನ ಭೂತವಲ್ಲ " ಎಂದು ಶೇಷಾಚಾರ್ಯರ ಕಂಠಸ್ವರ ಕಿವಿಯಲ್ಲಿ ಬೀಳುತ್ತಲೂ ನನ್ನ ದಿಗಲೆಲ್ಲಾ ಮಾಯವಾಗಿ ಮನಸ್ಸಿಗೆ ಒಂದು ವಿಧವಾದ ಸಂತೋಷವುಂಟಾಯಿತು. ಅವರ ಕೈ ಹಿಡಿದು ಕರೆದುಕೊಂಡು ಬಂದು ಕುಳ್ಳಿರಿಸಿ ಕೊಂಡೆ. ಏನು ಸುದ್ದಿ ಏನು ಸಮಾಚಾರ. ರೈಲು ಅನಾಹುತದಿಂದ ಹೇಗೆ ತಪ್ಪಿಸಿಕೊಂಡಿರಿ. ಈಗ ತಾನೇ ಪತ್ರಿಕೆಯಲ್ಲಿ ನಿಮ್ಮ ಹೆಸರನ್ನು ಓದಿ ನನಗಾದ ಸಂಕಟ ಹೇಳಲಾರೆ. ಅದು ಹೇಗೆ ತಪ್ಪು ಸುದ್ದಿ ಪ್ರಚಾರವಾಯಿತು ? ಎಂದು ಒಂದೇ ಸಮನೆ ಪ್ರಶ್ನೆ ಹಾಕಿದೆ

"ನಾನು ನಿನ್ನೆ ರಾತ್ರೆ ಹೊರಡಬೇಕಾಗಿತ್ತು. ಸೀಟ್ ರಿಸರ್ವ್ ಮಾಡಿಸಿದ್ದೆ. ಕೆಲವು ಸಮಾನು ಕೂಡ ಕಳುಹಿಸಿದ್ದೆ. ಆದರೆ ಕಾರಣಾಂತರದಿಂದ ನನಗೆ ರೈಲು ಹೊತ್ತಿಗೆ ಹೋಗುವುದಕ್ಕಾಗಲಿಲ್ಲ. ಒಳ್ಳೆಯ ವೇಳೆಯಾದ್ದರಿಂದ.."

" ನೀವು ಸೀಟ್ ರಿಜರ್ವ್ ಮಾಡಿಸಿದ್ದರಿಂದ ನಿಮ್ಮ ಹೆಸರನ್ನೂ ಸಾಮಾನುಗಳನ್ನೂ ನೋಡಿ, ಪತ್ರಿಕೆಯವರು ನಿಮ್ಮ ಹೆಸರನ್ನು ಹಾಕಿರಬಹುದು ".

" ಇರಬೇಕು, ಹಾಗೆಯೇ ಆಗಿರಬೇಕು. "

" ನಿಮ್ಮ ಮನೆಯವರೆಲ್ಲಾ ಎಷ್ಟು ಕಾತರಗೊಂಡಿರುವರೋ ! ಇವತ್ತು ಯಾಕೆ ಊರಿಗೆ ಹೋಗಲಿಲ್ಲ ? " ಎಂದು ಕೇಳಿದೆ.

" ಊರಿಗೆ ತಂತಿ ಕಳುಹಿಸಿ ಬಿಟ್ಟೆ. ನಿನ್ನನ್ನೂ ಸ್ವಲ್ಪ ಭಯಪಡಿಸಿ ಹೋಗೋಣವೆಂದು ಬಂದೆ. "

" ನನ್ನನ್ನೇ ಭಯಪಡಿಸುವುದು ? "

" ಹೌದು ; ಆ ದಿನ ಮಕುಟಪತಿಯ ಕಥೆ ಕೇಳಿ, ಅಣ್ಣನ ದೆವ್ವ ಎದುರಿಗೆ ಬಂದು ನಿಂತಿದೆಯೆಂದು ಹೇಳಿ ನಮ್ಮನ್ನೆಲ್ಲಾ ನೀನು ಭಯಪಡಿಸಲಿಲ್ಲವೇ ? ಅದಕ್ಕೆ ಪ್ರತಿಯಾಗಿ ಈಗ .. ..."

" ಅದೆಲ್ಲಾ ಕಥೆಗಳಲ್ಲಿ ನಡೆಯುತ್ತೆ. ಆದರೆ ನಿಜವಾಗಿ ಹಾಗೆ ನಡೆಯುತ್ತದೆಯೇ " ಎಂದೆ.

" ಅಯ್ಯೋ ! ನಿಮಗೆ ತಿಳಿಯದು. ನನ್ನ ಅನುಭವದಲ್ಲಿ ನಿಜವಾಗಿಯೂ ಹಾಗೆ ನಡೆದಿದೆ "

" ಹೇಗೆ ? "

" ಸತ್ತುಹೋದರೆಂದು ತಿಳಿದುಕೊಂಡಿದ್ದ ಮನುಷ್ಯರೊಬ್ಬರು, ಥಕ್ಕನೆ ಕಾಣಿಸಿಕೊಂಡಿದ್ದರಿಂದ ವಿಪತ್ತೊದಗಿತು. "

" ಏನು ವಿಪತ್ತು ? "

" ಪ್ರಾಣಕ್ಕೆ ವಿಪತ್ತು. "

ಯಾವುದೋ ಒಂದು ರಸಭರಿತವಾದ ಕಥೆ ಹೇಳುವುದಕ್ಕಾಗಿಯೇ ಶೇಷಾಚಾರ್ಯರು ಬಂದಿದ್ದಾರೆಂದು ಆಗ ತಿಳಿದುಕೊಂಡೆ.

" ಸರಿ ! ಸ್ವಾರಸ್ಯವಾದ ಕಥೆಯನ್ನಾದರೂ ಹೇಳಿ ನನ್ನ ಮನೋವ್ಯಥೆಯನ್ನು ಹೋಗಲಾಡಿಸಿ. ಏಕೋ ಇವತ್ತು ನನ್ನ ಮನಸ್ಸೇ ಸರಿಯಾಗಿಲ್ಲ " ಎಂದೆ.

"ನಾನು ಹೇಳುವ ಕಥೆ ಉತ್ಸಾಹವನ್ನುಂಟುಮಾಡುವಂತಹುದಲ್ಲ. ಬಹಳ ಶೋಕಭರಿತವಾದ್ದು. ಬೇಕಾದರೆ ಇನ್ನೊಂದು ದಿನ........"

"ಬೇಡ! ಬೇಡ! ಇವತ್ತೇ ಹೇಳಿ. ಮನಸ್ಸಿನಲ್ಲಿ ಉತ್ಸಾಹವಿಲ್ಲದಿರುವಾಗಲೇ ಶೋಕಭರಿತವಾದ ಕಥೆಯನ್ನು ಕೇಳಬೇಕೆನ್ನಿಸುತ್ತದೆ ಹೇಳಿ." ಎಂದು ಬಲಾತ್ಕರಿಸಿದೆ.

೨

ಶೇಷಾಚಾರ್ಯರು ಕಥೆ ಹೇಳುವುದಕ್ಕಾರಂಭಿಸಿದರೆ ಕೇಳುವವರಿಗೆ ಒಂದು ವಿಧವಾದ ಉತ್ಸಾಹವುಂಟಾಗುತ್ತದೆ ಹಾಗೆಯೇ ಅವರು ಈ ಸಲ ಕಥೆಯನ್ನಾರಂಭಿಸಿದೊಡನೆಯೇ ನಾನು ಕುತೂಹಲಭರಿತನಾಗಿ ಕುಳಿತುಕೊಂಡೆ. "ಹೂವಿನ ತೋಟದ ಭವಾನಿಯನ್ನು ಕೇಳಿದ ಜ್ಞಾಪಕವುಂಟೋ" ಎಂದು ಕೇಳಿದರು.

ಆ ಹೆಸರನ್ನು ಪೂರ್ವಜನ್ಮದಲ್ಲಿ ಎಲ್ಲೋ ಕೇಳಿದ ಹಾಗೆ ಜ್ಞಾಪಕ ಬಂತು. ಒಂದೆರಡು ಗ್ರಾಮಫೋನ್ ಪ್ಲೇಟ್ ಕೂಡ ಕೇಳಿದ ಹಾಗೆ ಜ್ಞಾಪಕ ಬಂತು. ಆದರೆ ನಾನು ಜ್ಞಾಪಿಸಿಕೊಂಡು ಹೇಳುವವರೆಗೆ ಶೇಷಾಚಾರ್ಯರು ಕಾಯಲಿಲ್ಲ. ಅವರ ಪಾಡಿಗೆ ಕಥೆಯನ್ನು ಮೊದಲು ಮಾಡಿಯೇ ಬಿಟ್ಟರು.

"ಮೂವತ್ತು ವರ್ಷ ಹಿಂದೆ ಹೂವಿನ ತೋಟದ ಭವಾನಿಯ ಹೆಸರು ಬಹಳ ಪ್ರಸಿದ್ಧಿಯಾಗಿತ್ತು. 'ವೀಣೆ ಭವಾನಿ' ಎಂದೂ ಕರೆವುದುಂಟು. ವೀಣೆ ಹಿಡಿದು ನುಡಿಸತೊಡಗಿದಳೆಂದರೆ ಸಾಕ್ಷಾತ್ ಸರಸ್ವತಿಯ ಅವತಾರವೇ! ಅವಳ ಕೊರಳಿಗೆ ಉಪಮಾನ ಹೇಳಬೇಕಾದರೆ ಅವಳು ವೀಣೆಯ ತಂತಿಯನ್ನು ಮೀಟುವಾಗ ಉಂಟಾಗುವ ನಾದಕ್ಕೆ ಸಮವೆನಿಸುತ್ತಿತ್ತು ಅವಳ ಮಧುರ ಸ್ವರ. ಆ ವೀಣೆಯ ನಾದಕ್ಕೆ ಉಪಮಾನ ಅವಳ ಕಂಠಸ್ವರ ಒಂದಲ್ಲದೆ ಬೇರೆಯಿಲ್ಲ. ಸಾವಿರಾರು ಜನಗಳು ಸೇರಿರುವ ಸಭೆಗಳಲ್ಲಿ ಅವಳ ಕಛೇರಿ ನಡೆಯುವುದುಂಟು. ಜನಗಳು ನಿಶ್ಶಬ್ದವಾಗಿದ್ದು ಕೇಳುವರು; ಪರವಶರಾಗುವರು. ದೇವಸ್ಥಾನಗಳಲ್ಲಿ, ಅದರಲ್ಲೂ ಮುಖ್ಯವಾಗಿ, ಬೇಲೂರು ಕೇಶವಸ್ವಾಮಿ ದೇವಾಲಯದಲ್ಲಿ ಉತ್ಸವ ಸಮಯದಲ್ಲಿ ಅವಳ ಕಛೇರಿ ಆಗಾಗ ನಡೆಯುವುದುಂಟು. ಈಗಿನ ಕಾಲದಲ್ಲಿ ನಾಸ್ತಿಕರ ಸಂಖ್ಯೆ ಬೆಳೆಯುತ್ತಾ ಇದೆ. ಉತ್ಸವಗಳನ್ನು ಶ್ರದ್ಧೆಯಿಂದ ನಡೆಸುವವರೇ ಬಹಳ ಕಡಿಮೆ. ಸಾಲದ್ದಕ್ಕೆ ಸಿನಿಮಾ, ನಾಟಕ ಬಂದು ಪ್ರಪಂ

ಚವೇ ಕೆಟ್ಟು ಹೋಗಿದೆ. ಆಗಿನ ಕಾಲದಲ್ಲಿ ಜನರಿಗೆ ದೇವರು, ಹಿರಿಯರು, ಉತ್ಸವ ಇವುಗಳಲ್ಲೆಲ್ಲಾ ಬಹು ಶ್ರದ್ಧಾಭಕ್ತಿ. ಒಂದು ದೇವಾಲಯದಲ್ಲಿ ಉತ್ಸವವೆಂಬ ವಾರ್ತೆ ತಿಳಿದರೆ ಸುತ್ತಾ ಮುತ್ತಾ ಇರುವ ಊರುಗಳ ಜನರೆಲ್ಲಾ ಬಂದು ಸೇರುವರು.

ಇಂತಹ ಉತ್ಸವ ಕಾಲಗಳಲ್ಲಿ ದೇವಾಲಯದ ಕಲ್ಯಾಣ ಮಂಟಪದಲ್ಲಿ ಸಂಗೀತ ಕಛೇರಿ ನಡೆಯುತ್ತವೆ. ಒಂದೊಂದು ಕಛೇರಿಗೂ ಅಸಾಧ್ಯ ಜನಸಂದಣಿ. ಅದರಲ್ಲೂ ಹೂವಿನ ತೋಟದ ಭವಾನಿಯ ಕಛೇರಿಯೆಂದರೆ ಹೇಳಬೇಕಾದ್ದೇ ಇಲ್ಲ. ಆ ಕಾಲದಲ್ಲಿ ಎಲ್ಲಾದರೂ ಗುಂಪು ಕೂಡಿದ್ದರೆ ಹೂವಿನ ತೋಟದ ಭವಾನಿಯ ಸಂಗೀತಕ್ಕೆ ಬಂದ ಹಾಗೆ ಜನ ಸೇರಿದ್ದಾರೆ ಎಂದು ಹೇಳಿಕೊಳ್ಳುವುದುಂಟು. ಅಷ್ಟು ಪ್ರಸಿದ್ಧಿ ಅವಳ ಸಂಗೀತ. ಅವಳ ಕಛೇರಿಗೆ ಬಂದು ಸೇರುವ ಸಾವಿರಾರು ಜನರು ಒಂದೇ ಸಮನೆ ಮಾತನಾಡುತ್ತಿದ್ದಾಗ ಗಲಾಟೆಗೆ ಕಡಿಮೆಯೆ ? ಆದರೆ ಭವಾನಿ ವೀಣೆಯ ತಂತಿ ಮೀಟಿ, ತನ್ನ ಕೋಕಿಲ ಕಂಠವನ್ನು ತೋರಿ ಶ್ರುತಿಗೆ ಸರಿಯಾಗಿ ಹಾಡುವುದಕ್ಕಾರಂಭಿಸುವುದೊಂದೇ ತಡ ; ಜನ ನಿಶ್ಶಬ್ದವಾಗಿ ಆಲಿಸತೊಡಗುವರು. ಭವಾನಿಯ ಶಾರೀರವೂ, ವೀಣೆಯ ನಾದವೂ ಕೂಡಿತೆಂದರೆ ಇಂದ್ರಜಾಲದ ಹಾಗೆ ತೋರುವುದು ಕೇಳುವವರಿಗೆ.

ಭವಾನಿಯ ಕಛೇರಿ ನಡೆದರೆ ನಾನು ತಪ್ಪಿಸಿಕೊಳ್ಳುತ್ತಿರಲಿಲ್ಲ. ಮದುವೆಗಳಲ್ಲೋ ಉತ್ಸವಗಳಲ್ಲೋ ಆಗಾಗ ಭವಾನಿಯ ಕಛೇರಿಯು ನಡೆಯುವುದುಂಟು. ಈ ಸಂದರ್ಭಗಳನ್ನು ನಾನು ಉಪಯೋಗಿಸಿಕೊಳ್ಳದಿರುತ್ತಿರಲಿಲ್ಲ. ಅವಳ ಸಂಗೀತ ಕೇಳುತ್ತಿರುವಾಗ ನನಗೆ ಅಡಿಗಡಿಗೆ ಕಣ್ಣೀರು ಸುರಿಯುವುದು. ಅದಕ್ಕೆ ಕಾರಣವೇನೆಂದು ಕೇಳುವಿರಾ ? ಅದೇ ನನಗೆ ತಿಳಿಯದು. ಸಂಗೀತ ಕೇಳುವಾಗ ಒಂದು ವಿಧವಾದ ಆನಂದವುಂಟಾಗಿ ಆನಂದ ಭಾಷ್ಪ ಸುರಿಯುತ್ತ ವೆಂದು ತಿಳಿಯುತ್ತೇನೆ. ಕಛೇರಿ ಮುಗಿದ ಕೂಡಲೆ ನಾನು ಭವಾನಿಯನ್ನು ಹೋಗಿ ನೋಡುವೆನು. " ತಂಗಿ, ಅಮ್ಮನಿಗೆ ಹೇಳಿ ದೃಷ್ಟಿ ತೆಗೆಸಿಕೊಳ್ಳಮ್ಮ " ಎನ್ನುವೆನು. ಭವಾನಿಯ ತಾಯಿ ಕೂಡ ಮಗಳನ್ನು ಎಷ್ಟೋ ಕಣ್ಣಾಗಿ, ಕಾವಲಾಗಿ ಕಾಪಾಡುತ್ತಾ ಬಂದಳು. ಆದರೂ ಕೊನೆಗೆ ದೃಷ್ಟಿ ತಗಲಿಯೇ ಬಿಟ್ಟಿತು.

ಭವಾನಿಯ ತಾಯಿಗೆ ಹೂವಿನ ತೋಟದ ಬೃಹದಾಂಬೆ ಎಂದು ಹೆಸರು. ಅವಳು ಆಗರ್ಭ ಶ್ರೀಮಂತಿನಿ. ಗುಣಶಾಲಿಯೆಂದು ಹೆಸರು ಪಡೆದವಳು. ಒಬ್ಬ

ದೊಡ್ಡ ಮನುಷ್ಯನಲ್ಲಿ ಸ್ನೇಹವಿಟ್ಟು ಆತನ ಧರ್ಮದಲ್ಲೇ ತಾನೂ ನಿರತಳಾಗಿದ್ದು, ಆತನ ಸೇವೆಯನ್ನು ಬಿಟ್ಟು ಬೇರೆ ಯಾರನ್ನೂ ಕಣ್ಣೆತ್ತಿ ಕೂಡ ನೋಡದವಳು. ಆತನ ಕಾಲಾನಂತರ ಭಗವಂತನಲ್ಲಿ ತನ್ನ ಸೇವೆ ಸಲ್ಲಿಸತೊಡಗಿ ಬಹಳ ಭಕ್ತಿಯಿಂದಿರುತ್ತಿದ್ದಳು.

ತಾಯಿಯ ಸ್ವಭಾವವೇ ಮಗಳಿಗೂ ಇತ್ತು. ಹಣೆಯಲ್ಲಿ ದಿನ್ನಾಗಿ ವಿಭೂತಿಯಿಟ್ಟುಕೊಳ್ಳುವಳು. ಕಛೇರಿಗಳಲ್ಲಿ ಭಕ್ತಿರಸ ಹಾಡುಗಳನ್ನೇ ಹಾಡುವಳು. ಮನೆಯಲ್ಲಿ ಪ್ರತಿದಿನವೂ ಸ್ನಾನ, ಪೂಜೆ ಎಲ್ಲವೂ ವಿಶೇಷವಾಗಿ ನಡೆಯುವುದು. ಇದನ್ನೆಲ್ಲಾ ನೋಡಿದ ಜನ " ಭವಾನಿಗೆ ದೇವರ ಹುಚ್ಚು ಹಿಡಿದಿದೆ " ಎಂದಾಡಿಕೊಳ್ಳುವರು.

ಬೃಹದಾಂಬೆಗೆ ತನ್ನ ಮಗಳನ್ನು ಒಬ್ಬ ಯೋಗ್ಯವರನಿಗೆ ಕೊಟ್ಟು ಮದುವೆಮಾಡಬೇಕೆಂದು ಇಷ್ಟ. ಆದರೆ ಭವಾನಿ ತಾನು ದೇವರನ್ನೇ ಮದುವೆಮಾಡಿಕೊಳ್ಳುವುದಾಗಿ ಹೇಳಿಕೊಳ್ಳುತ್ತಿದ್ದಳು. ಅವರಿಬ್ಬರ ಇಚ್ಛೆಯೂ ನೆರವೇರಲಿಲ್ಲ. ಯಾರೋ ಒಬ್ಬರು ಮತ್ತೊಬ್ಬರಲ್ಲಿ ಒಂದು ಮಾತನ್ನು ಹೇಳಿದ ಕಾರಣದಿಂದ ದೃಷ್ಟಿ ತಗಲಿಯೇ ಬಿಟ್ಟಿತು.

ಒಂದು ಸಲ ಬೇಲೂರು ದೇವಾಲಯದಲ್ಲಿ ಕಛೇರಿ ಮುಗಿಸಿಕೊಂಡು ಭವಾನಿ ಹೊರಗೆ ಬಂದು ಗಾಡಿಯಲ್ಲಿ ಕುಳಿತುಕೊಳ್ಳುವ ಸಮಯದಲ್ಲಿ, ಒಬ್ಬ ಮನುಷ್ಯ ತನ್ನ ಸ್ನೇಹಿತನೊಡನೆ ಹೇಳುತ್ತಿದ್ದ ಒಂದು ಮಾತು ಅವಳ ಕಿವಿಯಲ್ಲಿ ಬಿದ್ದಿತು. " ಹಾಡು, ಹಾಡು ಎನ್ನುವೆಯಲ್ಲಾ. ಹಾಡು ಇರಲಿ ! ಅವಳ ಮುಖದಲ್ಲಿ ಸುರಿಯುವ ಕಳೆನೋಡು ! " ಎಂದರು ಆ ಮನುಷ್ಯ. ಇದನ್ನು ಕೇಳಿದೊಡನೆಯೇ ಭವಾನಿ ಗಟ್ಟಿಯಾಗಿ ನಕ್ಕು ಬಿಟ್ಟಳು. ನಗುವವರಾರೆಂದು ಆ ಮನುಷ್ಯರು ತಿರುಗಿ ನೋಡಿದರೆ ಭವಾನಿ. ಭವಾನಿಯು ಥಟ್ಟೆಂದು ಗಾಡಿಯಲ್ಲಿ ಕುಳಿತುಕೊಂಡು ಮನೆಗೆ ಹೋಗಿ ಬಿಟ್ಟಳು. ಅವರೂ ಹೊರಟು ಹೋದರು.

ವಿಧಿಯೆಂದು ಹೇಳುವರಲ್ಲಾ ಇದು ತಾನೇ ವಿಧಿ ! ಅಷ್ಟೊಂದು ಗುಂಪಿನ ಮಧ್ಯೆ, ಕತ್ತಲೆಯಲ್ಲಿ, ಆ ಮನುಷ್ಯ ಆ ಮಾತನ್ನು ಭವಾನಿಯು ಗಾಡಿಯೇರುವ ಸಮಯದಲ್ಲಿ ಹೇಳಲೇಕೆ ? ಅದು ಭವಾನಿಯ ಕಿವಿಯಲ್ಲಿ ಬೀಳಲೇಕೆ ?

ಭವಾನಿ ಮನೆಗೆ ಹೋದ ಕೂಡಲೆ "ಅಮ್ಮಾ, ಈ ದಿನ ಕರವಸ್ತ್ರವನ್ನೇಕೆ ತರ ಲಿಲ್ಲ ?" ಎಂದು ಕೇಳಿದಳಂತೆ. ಅವರಮ್ಮನು ಇದೇನು ಮಹಾ ಎಂದು ಸುಮ್ಮ ನಿದ್ದಳಂತೆ. ಭವಾನಿಯು "ಕೇಳಮ್ಮಾ ! ಮಂಟಪದಲ್ಲಿರುವುದು ಅಸಾಧ್ಯ. ಬೆವರು ಮುಖದಲ್ಲಿ ಸುರಿಯುತ್ತಲೇ ಇತ್ತು. ಇದನ್ನು ನೋಡಿ ಒಬ್ಬ ಮನು ಷ್ಯರು ಕಳೆ ಸುರಿಯುತ್ತಿದೆ ಎಂದು ಹೇಳಿಕೊಂಡು ಹೋದರು ಎಂದು ನಕ್ಕಳಂತೆ. ಇದನ್ನೆಲ್ಲಾ ಭವಾನಿಯೂ, ಅವಳ ತಾಯಿಯೂ ನನಗೆ ಹೇಳಿದರು. ಹೀಗೆ ಹಾಸ್ಯ, ನಗೆ ಇವುಗಳೊಡನೆ ಆರಂಭವಾಗಿದ್ದು ವಿಪರೀತವಾಗಿ ಕೊನೆಗಂಡಿತು.

೩

ಆ ಮನುಷ್ಯರೂ ನನಗೆ ತಿಳಿದವರೇ. ತುಂಬೇವನದ ಗೋಪಾಲಸ್ವಾಮಿ ಎಂಬು ಅವರ ಹೆಸರು. ಅವರು ಜಮೀನುದಾರರು. ಚಿಕ್ಕ ವಯಸ್ಸು. ಅವರ ಮದುವೆಗೆ ಕೂಡ ನಾನು ಹೋಗಿದ್ದೆ. ಅವರ ಮದುವೆಯಾಗಿ ಆ ಕಾಲಕ್ಕೆ ೫-೬ ವರುಷಗಳ ಮೇಲಾಗಿರಬಹುದು. ಅವರಿಗೆ ಮಕ್ಕಳೂ ಇದ್ದರು. ಅವ ರಿಗೂ ಭವಾನಿಗೂ ವಿಧಿವಿಲಾಸದಿಂದ ಸ್ನೇಹವುತ್ಪನ್ನವಾಯಿತು. ಅವರಿಬ್ಬರೂ ಮತ್ತೆ ಎಲ್ಲಿ ಸಂಧಿಸಿದರೋ, ಸ್ನೇಹವು ಹೇಗೆ ಬೆಳೆಯಿತೋ ನನಗೆ ತಿಳಿಯದು. ವಿಧಿಯಿರುವಾಗ ಹೇಗಾದರೂ ಮಾರ್ಗವೇರ್ಪಡುತ್ತದೆ. ಭವಾನಿಗೆ ಹಿಡಿದಿದ್ದ ದೇವರ ಹುಚ್ಚು ಮಾಯವಾಯಿತೆಂಬ ವಾರ್ತೆ ಊರೆಲ್ಲಾ ಹರಡಿತು. ಅದರ ಜೊತೆಯಲ್ಲಿ ತುಂಬೇವನದ ಗೋಪಾಲಸ್ವಾಮಿಯ ಹೆಸರೂ ಹೊರ ಹೊರಟಿತು.

ನನಗೆ ಈ ವಿಷಯಗಳು ಅಷ್ಟು ನೆಮ್ಮದಿಯನ್ನುಂಟುಮಾಡಲಿಲ್ಲ. ಈ ತೆರನಾದ ಒಂದು ಜಾತಿಯು ಮತ್ತೊಂದು ಜಾತಿಯಲ್ಲಿ ಸ್ನೇಹ ಬೆಳೆಸುವುದು ನನಗಿಷ್ಟವಿಲ್ಲವೆಂಬುದು ನಿನಗೆ ತಿಳಿದೇ ಇದೆ. ಕೊನೆಗೆ ಹೀಗಾಗಬೇಕೆ ? ಯಾ ರಾದರೂ ಒಬ್ಬ ಯೋಗ್ಯವರನನ್ನು ಮದುವೆಯಾಗಬಾರದಾಗಿತ್ತೇ ಎಂದು ಮರು ಗಿದೆ. ಗೋಪಾಲಸ್ವಾಮಿಯ ಹೆಂಡತಿ, ಮಕ್ಕಳನ್ನು ನೆನೆದು ಪರಿತಾಪಗೊಂಡೆ. ಇವೆಲ್ಲದರ ಜೊತೆಗೆ, ಭವಾನಿಯ ದೈವಿಕವಾದ ಸಂಗೀತಕ್ಕೆ ಕೇಡು ಬರದೇ ಇರ ಬೇಕಲ್ಲಾ ಎಂದು ಭಯಪಟ್ಟೆ.

ದೇವರ ಕೃಪೆಯಿಂದ ಹಾಗೇನೂ ಆಗಲಿಲ್ಲ. ಗೋಪಾಲಸ್ವಾಮಿಯು ಸಂಗೀತಪ್ರೇಮಿ. ಭವಾನಿ ಹಾಡುವುದು ಅವರಿಗೆ ಒಂದು ಹೆಮ್ಮೆಯ ವಿಷಯವಾ

ಗಿತ್ತು. ಅವರು ಒಂದು ಸಲ ನನ್ನೊಡನೆ ಹೇಳಿದ ಮಾತು ನನಗೆ ಚೆನ್ನಾಗಿ ಜ್ಞಾಪಕವಿದೆ. "ಬೇರೆ ಮನುಷ್ಯರನ್ನು ಸೃಷ್ಟಿಸಿದ ಹಾಗೆ ಬ್ರಹ್ಮನು ಭವಾನಿಯನ್ನು ಸೃಷ್ಟಿಸಿಲ್ಲ ; ಕಲ್ಯಾಣಿ ರಾಗವನ್ನೂ, ಮೋಹನವನ್ನೂ, ಕೇದಾರ ಗೌಳವನ್ನೂ, ಜಂಜೂಟಿಯನ್ನೂ ಸೇರಿಸಿ ಸೃಷ್ಟಿಸಿದಾನೆ! ನೀವು ಬೇಕಾದರೆ, ನೋಡಿ! ಭವಾನಿ ಸಾಯುವಾಗ ಅವಳ ದೇಹವು ಹಾಗೆಯೇ ಕರಗಿ ರಾಗಗಳಾಗಿ ಹೋಗಿಬಿಡುತ್ತದೆ" ಎಂದು ಗೋಪಾಲಸ್ವಾಮಿಯು ಹೇಳಿದಾಗ, 'ಇರಬಹುದು ; ಆದರೆ ನಾನೂ ನೀವೂ ಅವನ್ನು ನೋಡಲಾರೆವು. ನಮ್ಮಿಬ್ಬರ ನಂತರ ಬಹು ಕಾಲ ಭವಾನಿ ಹಾಡಿಕೊಂಡಿರುವಳು' ಎಂದೆ. ಆದರೆ ಮುಂದೆ ಆಗುವುದನ್ನು ತಿಳಿದುಕೊಳ್ಳುವ ಶಕ್ತಿಯನ್ನು ದೇವರು ನಮಗೆ ಕರುಣಿಸಲಿಲ್ಲ ! ಆ ಶಕ್ತಿಯಿದ್ದಿದ್ದರೆ ಪ್ರಪಂಚವು ಹೇಗಿರುತ್ತಿತ್ತೋ !

ಭವಾನಿಯ ಸಂಗೀತ ದಿನೇ ದಿನೇ ಅಭಿವೃದ್ಧಿ ಹೊಂದುತ್ತಿತ್ತು. ಅದರ ಪಳಗಿದ ನನ್ನ ಕಿವಿಗಳಿಗೆ ಅದರಲ್ಲಿ ಎಷ್ಟೆಷ್ಟೋ ಬದಲಾವಣೆ ಕಂಡು ಬಂದವು. ಒಂದು ಕಛೇರಿಯಂತೆ ಮತ್ತೊಂದಿರದು. ಒಂದು ದಿನ ಅವಳ ಹಾಡಿನಲ್ಲಿ ಕುತೂಹಲ ಉಕ್ಕುವುದು ; ಪ್ರಾತಃಕಾಲದಲ್ಲಿ ಸೂರ್ಯದೇವನನ್ನು ಸ್ವಾಗತಿಸುತ್ತಿರುವ ನವಿಲುಗಳ ಕಂಠದಲ್ಲಿ ತೋರುವ ಆನಂದವೂ, ಪೌರ್ಣಮಿಯಂದು ಬೆಳದಿಂಗಳನ್ನು ಕಂಡು ಉಕ್ಕುವ ಸಮುದ್ರರಾಜನ ಉತ್ಸಾಹವೂ ತೋರುವುದು. ಮತ್ತೊಂದು ಕಛೇರಿಯಲ್ಲೋ, ಅವಳ ಹಾಡನ್ನು ಕೇಳುವಾಗ, ಯಾವ ಕಾರಣವೂ ಇಲ್ಲದ ಶೋಕವುಂಟಾಗುವುದು. ತಾಯಿಯನ್ನಗಲಿದ ಮಗುವಿನ ದೈನ್ಯಸ್ವರವನ್ನೂ, ದೇವರನ್ನಗಲಿದ ಭಕ್ತನ ತಾಪವನ್ನೂ ಅವಳ ಹಾಡಿನಲ್ಲೇ ಕೇಳುವ ಹಾಗೆ ತೋರುವುದು. ಅವಳು ವೀಣೆ ನುಡಿಸುವಾಗ ಕೈಯಲ್ಲಿರುವ ವಾದ್ಯತಂತಿಗಳನ್ನು ಮಾಟುತ್ತಿರುವಳೋ, ಅಥವಾ, ಕೇಳುವವರ ಹೃದಯ ವೀಣೆಯ ತಂತಿಗಳನ್ನು ಮಾಟುತ್ತಿರುವಳೋ ಎಂಬ ಸಂದೇಹವುಂಟಾಗುವುದು.

ಮೊದ ಮೊದಲು ನನಗೆ ಇದೆಲ್ಲಾ ಒಂದು ವಿನೋದದಂತಿದ್ದಿತು. ಬಿಡಿಸಲಾರದ ಸಮಸ್ಯೆಯಾಗಿತ್ತು ; ಕೊನೆಗೆ ಒಂದು ವಿಷಯ ತಿಳಿಯಿತು. ಪ್ರೇಮ, ಪ್ರಣಯ ಎಂದು ಹೇಳುತ್ತಾರಲ್ಲಾ, ಅದು ಬಹು ಅತಿಶಯವಾದ್ದು. ಅದರಲ್ಲಿ ಜನಗಳಿಗುಂಟಾಗುವುದೇನು ? ದುಃಖವೋ ? ಸುಖವೋ ? ಹೇಳಲಾರದಂಥ ಆನಂದವೋ. ಭವಾನಿಯ ಮತ್ತು ಗೋಪಾಲಸ್ವಾಮಿಯ ವಿಷಯವಾಗಿ ನಾನು

ಕೇಳಿದ್ದೆಲ್ಲಾ ನನಗೆ ಈ ರೀತಿ ಸಂದೇಹ ಹುಟ್ಟಿಸಿತು. ಅವರು ಸಂತೋಷವಾಗಿದ್ದ ಕಾಲವು ಹೆಚ್ಚೋ ಅಥವಾ ಜಗಳವಾಡಿ ಮನೋವೇದನೆಯನ್ನು ಅನುಭವಿಸಿಕೊಂಡಿದ್ದ ಕಾಲವು ಹೆಚ್ಚೋ ಎಂದು ಹೇಳಲಾಗುತ್ತಿರಲಿಲ್ಲ. 'ಈ ಹುಡುಗಿಗೆ ಏನೋ ಹಿಡಿದಿದೆ ಶೇಷಪ್ಪಾ!' ಎಂದು ಅವಳ ತಾಯಿಯು ಹೇಳುವರು. ಒಂದೊಂದು ಸಲ ಭವಾನಿಯು ಎಲ್ಲರ ಮೇಲೂ ಉರಿದು ಬೀಳುವಳಂತೆ. ಚಿಕ್ಕ ಚಿಕ್ಕ ಕೆಲಸಗಳಲ್ಲೆಲ್ಲಾ ರಗಳೆಮಾಡುವಳಂತೆ. ತಲೆ ತಲೆ ಹೊಡೆದುಕೊಳ್ಳುವಳಂತೆ ಮುಖವನ್ನು ಕೂಡ ತೊಳೆದುಕೊಳ್ಳದೆ ಪಿಶಾಚಿ ಹಿಡಿದವಳ ಹಾಗೆ ಸುಮ್ಮನೆ ಕುಳಿತು ಬಿಡುವಳಂತೆ. ಇನ್ನೊಂದು ಸಲ ಇದಕ್ಕೆ ವ್ಯತಿರಿಕ್ತವಾಗಿ ಬಹು ಉತ್ಸಾಹಭರಿತಳಾಗಿ ಚೆನ್ನಾಗಿ ಅಲಂಕಾರ ಮಾಡಿಕೊಳ್ಳುವಳಂತೆ. ಸದಾ ನಗುತ್ತಲೂ ಕುತೂಹಲಭರಿತಳಾಗಿಯೂ ಇರುವಳಂತೆ. ಇದನ್ನೆಲ್ಲಾ ಕೇಳಿದ ಮೇಲೆ, ಭವಾನಿಯ ಸಂಗೀತದಲ್ಲಿ ಕಂಡು ಬಂದ ಚಲಾವಣೆಗೆ ಕಾರಣವು ಇದೇ ಎಂದು ತಿಳಿದುಕೊಂಡೆ. "ಯಾರಾದರೂ ಮಂತ್ರವಾದಿಗಳಿಗೆ ತೋರಿಸಲೇ." ಎಂದು ಬೃಹದಾಂಬೆಯು ಕೇಳಿದ್ದಕ್ಕೆ "ಮಂತ್ರವೂ ಬೇಡ, ಮಾಯವೂ ಬೇಡ, ದಿನಗಳು ಕಳೆಯುತ್ತಾ ತಾನೇ ಸರಿಹೋಗುವಳು." ಎಂದು ಹೇಳಿಬಿಟ್ಟು ಬಂದೆ.

೪

ಎರಡು, ಮೂರು ವರ್ಷ ಕಳೆದವು. ಈ ಕಾಲದಲ್ಲಿ ಗೋಪಾಲಸ್ವಾಮಿಯ ಸ್ವಂತ ಕೆಲಸಗಳು ಬಹಳ ಕೆಟ್ಟುಹೋದವು. ಅವರಿಗೆ ವಿರೋಧಿಗಳು ಹೆಚ್ಚಾದರು. ಭವಾನಿಯ ಮೇಲೆ ಮನಸ್ಸಿಟ್ಟಿದ್ದ ಎಷ್ಟೋ ಜನ ಹಣವಂತರಿಗೆ ಗೋಪಾಲಸ್ವಾಮಿಯ ವಿಷಯವಾಗಿ ವೈರವುಂಟಾಯಿತು. ಸರಿ. ಅವರೆಲ್ಲಾ ಸೇರಿ ಗೋಪಾಲಸ್ವಾಮಿಗೆ ಹೇಗಾದರೂ ಕೆಡಕುಮಾಡಬೇಕೆಂದು ನಿರ್ಧರಿಸಿದರು. ಮೊದಲು ಒಂದು ದೇವಾಲಯದ ಪಂಚಾಯಿತಿಯ ವಿಷಯವಾಗಿ ಮೊಖದ್ದಮೆ ಹೂಡಿದರು. ದೇವಾಲಯದ ಮೂರು ಜನ ಧರ್ಮದರ್ಶಿಗಳಲ್ಲಿ ಗೋಪಾಲಸ್ವಾಮಿಯೂ ಒಬ್ಬರು. ಇಬ್ಬರು ಧರ್ಮದರ್ಶಿಗಳು ಗೋಪಾಲಸ್ವಾಮಿಯನ್ನು ಬಿಟ್ಟು ಬಿಟ್ಟು ದೇವಾಲಯದ ಕಾರ್ಯಗಳನ್ನೆಲ್ಲಾ ತಾವೇ ನಡೆಸಿಕೊಂಡು ಬಂದಿದ್ದಲ್ಲದೆ ದೇವರ ಉತ್ಸವ ಕಾಲದಲ್ಲಿ ಗೋಪಾಲಸ್ವಾಮಿಗೆ ಅವಮಾನಮಾಡಿದರು. ಇದರಿಂದ ಕೋಪಗೊಂಡು ಗೋಪಾಲಸ್ವಾಮಿ ಮೊಖದ್ದಮೆ ಹೂಡಿ

ಕರು. ಇದು ಪ್ರಾರಂಭವಾಗಿ ಸಿವಿಲ್ ಮತ್ತು ಕ್ರಿಮಿನಲ್ ಮೊಕದ್ದಮೆಗಳು ನಡೆದು ಇದ್ದವು. ಗೋಪಾಲಸ್ವಾಮಿಯವರ ಜಮೀನಿನ ಅಕ್ಕಪಕ್ಕದ ಜಮೀನುದಾರರೆಲ್ಲಾ ಅವರನ್ನು ಮೊದಲು ನಾಶಗೊಳಿಸಿ, ಅನಂತರ ಬೇರೆಯ ಕೆಲಸ ಮಾಡುತ್ತೇವೆಂದು ಪ್ರತಿಜ್ಞೆಮಾಡಿಕೊಂಡರು. ಇದರ ಫಲವಾಗಿ ಗೋಪಾಲಸ್ವಾಮಿಗೆ ದಿನೇ ದಿನೇ ಸಾಲವೇರಿತು. ಪ್ರತಿ ವರುಷವೂ ಸ್ವಲ್ಪ ಸ್ವಲ್ಪ ಭೂಮಿ ಮಾರತೊಡಗಿದರು.

ಒಂದು ಸಲ ತುಂಬೇವನದ ದೇವಾಲಯದ ಉತ್ಸವ ಕಾಲವಲ್ಲಿ ಗೋಪಾಲಸ್ವಾಮಿಯ ಮನೆಗೆ ಹೋಗಿದ್ದೆ. ಅವರ ಹೆಂಡತಿ —ನಮ್ಮೂರಿನವಳೇ. ಪಾಪ ! ದುಃಖದಲ್ಲಿ ಮುಳುಗಿ ಹೋಗಿದ್ದಳು. ನನ್ನನ್ನು ಕಂಡೊಡನೆ ಅಳುತ್ತಾ "ಶೇಷಪ್ಪಾ ಇದೆಲ್ಲಾ ಆ ಹೂವಿನ ತೋಟದ ಮೂದೇವಿಯಿಂದಾದ್ದು" ಎಂದಳು. ನನ್ನ ಮನಸ್ಸೂ ಕಳವಳಗೊಂಡಿತು. ಇಂಥ ಜಾತಿ ದೇವರು ಏಕೆ ಸೃಷ್ಟಿಸಿದನೋ ಎಂದು ನೊಂದೆ. ಇನ್ನೊಂದು ಸಲ ಬೇಲೂರಿಗೆ ಹೋದಾಗ ನನ್ನ ಕೋಪವನ್ನೆಲ್ಲಾ ಭವಾನಿಯ ಮೇಲೆ ತೀರಿಸಿಬಿಡುವುದೆಂದು ತೀರ್ಮಾನಿಸಿದೆ. ಆದರೆ ಅಲ್ಲಿ ಹೋಗಿ ಭವಾನಿಯ ಸ್ಥಿತಿಯನ್ನು ನೋಡುತ್ತಲೂ, ನನ್ನ ಕೋಪವೆಲ್ಲಾ ಮಾಯವಾಗಿ ಹೋಯಿತು. ಅವಳೂ ಶೋಕದಲ್ಲಿ ಮುಳುಗಿದ್ದಳು. "ನನ್ನಿಂದ ಅವರಿಗೆ ಇಷ್ಟು ಕಷ್ಟವಾಯಿತಲ್ಲಾ !" ಎಂದು ಹೇಳಿಕೊಂಡು ಅತ್ತಳು. ನಾನೇ ಅವಳಿಗೆ "ತಂಗಿ, ಇದರಲ್ಲಿ ನಿನ್ನ ತಪ್ಪೇನು ? ನೀನೇನು ಮಾಡಿದೆ ? ಸುಮ್ಮನೆ ಅಳಬೇಡಮ್ಮಾ" ಎಂದು ಸಮಾಧಾನ ಹೇಳಬೇಕಾಯಿತು.

'ಅಣ್ಣಾ ! ಅವರನ್ನು ಇಲ್ಲಿಯೇ ಬಂದು ಇದ್ದು ಬಿಡುವಂತೆ ಎಷ್ಟೋ ಹೇಳಿದೆ. ಕೇಳುವುದಿಲ್ಲ. ನೀವಾದರೂ ಹೇಳಿ ಒಪ್ಪಿಸಿ. ಬೆಳಗಾದರೆ ಕೋರ್ಟಿಗೆ ಹೋಗುವುದೇ ಅವರ ಕೆಲಸವಾಗಿದೆ. ಸ್ವಲ್ಪಕ್ಕೆಲ್ಲಾ ಜಗಳವಾಡಬೇಕೇಕೆ ? ಇಲ್ಲಿ ಮೂರು ನಾಲ್ಕು ಸಂಸಾರ ನಿರ್ವಹಿಸುವಷ್ಟು ಆಸ್ತಿಯಿದೆ. ಇದನ್ನೆಲ್ಲಾ ಯಾರು ಕಟ್ಟಿಕೊಂಡು ಹೋಗಬೇಕು ? " ಎಂದಳು.

'ಅದು ಆಗುವ ಕೆಲಸವೇ ತಂಗಿ ? ಗಂಡಸಲ್ಲವೆ ? ರೋಷವಿಲ್ಲವೇ ? ಇದಕ್ಕೆಲ್ಲಾ ಭಯಪಟ್ಟು ಊರುಬಿಟ್ಟು ಬರುತ್ತಾರೆಯೆ ? ಅದರಲ್ಲೂ ಇಲ್ಲಿಗೆ ? ಒಂದುವೇಳೆ ಅವರು ಒಪ್ಪಿದರೂ ಹೆಂಡತಿ ಮಕ್ಕಳಿರುವರಲ್ಲಾ ! " ಎಂದೆ.

ಭವಾನಿಯ ತಾಯ ಹತ್ತಿರವೂ ಈ ವಿಷಯವಾಗಿ ಮಾತಾಡಿದೆ. "ಅಕ್ಕಾ, ನಮಗೆ ಏಕೆ ಈ ಕೆಟ್ಟ ಹೆಸರು ? ಭವಾನಿಯಿಂದ ಒಂದು ದೊಡ್ಡ ಸಂಸಾರವೇ ಕೆಟ್ಟು ಹೋಯಿತು ಎಂದು ಈ ದೇಶವೇ ಆಡಿಕೊಳ್ಳುವುದಲ್ಲಾ '' ಎಂದೆ.

'ಯಾರು ಏನಾದರೂ ಹೇಳಿಕೊಳ್ಳಲಿ ಶೇಷಪ್ಪಾ ! ಅವರಿಬ್ಬರನ್ನೂ ಅಗಲಿಸುವುದು ಪಾಪ. ಅಗಲಿಸಿದರೆ ನನ್ನ ಮಗಳೂ ಬದುಕಿರಲಾರಳು ಎಂದಳು.' ಬೃಹದಾಂಬ.

'ಹೀಗೆ ಎಷ್ಟೋ ಜನ ಹೇಳಿರುವುದನ್ನ ನಾವು ಕೇಳಿಲ್ಲವೇ ಅಕ್ಕಾ ?'

'ನಿನಗೆ ಭವಾನಿ ಸಮಾಚಾರ ತಿಳಿಯದಪ್ಪಾ ! ಎಲ್ಲರ ಹಾಗಲ್ಲ ಅವಳು' ಎಂದಳು.

" ಈಗ ಅವರಿಬ್ಬರೂ ಹೇಗಿದ್ದಾರೆ ? ಮೊದಲಿನ ಹಾಗೇ ಸಿಡಿಮಿಡಿಯೋ? ಹೇಗೆ ? " ಎಂದು ಕೇಳಿದೆ.

'ಭವಾನಿಯ ಗುಣ ಪೂರಾ ಬದಲಾಯಿಸಿದೆ; ಈಗ ಅವಳು ಶಾಂತಮೂರ್ತಿ; ಇದಕ್ಕೆ ಪ್ರತಿಯಾಗಿ ಈಗ ಗೋಪಾಲಸ್ವಾಮಿ ರುದ್ರಮೂರ್ತಿಯಾಗುತ್ತಿದ್ದಾನೆಂದು ಗೊತ್ತಾಯಿತು. ಇದರಿಂದ ಅವರು ಭವಾನಿಯ ವಿಷಯದಲ್ಲಿ ಸಂಶಯಪಡಲಾರಂಭಿಸಿದರಂತೆ. ಮನುಷ್ಯ ಸ್ವಭಾವವೇ ವಿಚಿತ್ರವಾದ್ದು. ಭವಾನಿ ಅವರನ್ನೇಕೆ ಪ್ರೀತಿಸಬೇಕು ? ನಿರ್ಬಂಧವೇ ? ಕಷ್ಟೇನಿದೆ ? ಮನಸಾರ ಒಪ್ಪಿ ಅವರನ್ನೇ ದೈವವೆಂದು ನಂಬಿರುವವಳ ಮೇಲೂ ಸಂಶಯವೇ ?' ಎಂದುಕೊಂಡೆ. ನನ್ನ ಮೈ ಪಾದರಸವಾಯಿತು. ಆದರೆ ನನಗೇಕೆ ? ಎಂದುಕೊಂಡು, ಮಾತಾಡದೆ ಹೊರಟು ಹೋದೆ.

ಇದು ನಡೆದ ಒಂದು ವರುಷದವರೆಗೂ ನನಗೆ ಬೇಲೂರಿಗೆ ಹೋಗಲಾಗಲಿಲ್ಲ. ಭವಾನಿಯ ತಾಯಿ ಸತ್ತ ಸುದ್ದಿ ಕೇಳಿದಾಗ ಹೋಗಿದ್ದೆ. ಅದಾದನಂತರ ಅಲ್ಲಿಗೆ ಹೋಗುವುದನ್ನೇ ನಿಲ್ಲಿಸಿಬಿಟ್ಟೆ. " ನಮಗೇಕೆ ಒಬ್ಬರ ತಂಟೆ ? '' ಎಂದುಕೊಂಡು ಸುಮ್ಮನಿದ್ದು ಬಿಟ್ಟೆ !

ಗೋಪಾಲಸ್ವಾಮಿಯ ಕೆಲಸ ಬರಬರುತ್ತ ಕೆಡುತ್ತಿದೆಯೆಂದು ಮಾತ್ರ ಆಗಾಗ ಕಿವಿಯಲ್ಲಿ ಬೀಳುತ್ತಿತ್ತು. ಬೆಂಗಳೂರು ಹೈಕೋರ್ಟಿನಲ್ಲಿ ಅವರ ಕೇಸೊಂದು ನಡೆಯುತ್ತಿರುವುದಾಗಿಯೂ, ಅದರಲ್ಲಿ ಸೋತುಹೋದರೆ ಆಸಾಮಿ ದಿವಾಳಿಯಾಗುವಂತೆಯೇ ಎಂದೂ ಕೇಳಿದೆ.

ಹೀಗಿರುವಾಗ ಒಂದು ಭಯಂಕರ ರೈಲ್ವೇ ಅನಾಹುತವಾಯಿತು. ಬೆಂಗಳೂರಿಗೂ ಅರಸೀಕೆರೆಗೂ ಮಧ್ಯೆ ೩ ಗಾಡಿ ಬಿದ್ದುಬಿಟ್ಟವೆಂದೂ, ೪೦-೫೦ ಜನ ಸತ್ತುಹೋದರೆಂದೂ ತಿಳಿಯಿತು. ನನಗೆ ಪತ್ರಿಕೆ ಓದುವುದರಲ್ಲಿ ತುಂಬಾ ಆಶೆ; ಅದರಲ್ಲೂ, ಈ ಭಯಂಕರ ರೈಲ್ವೆ ಅನಾಹುತ ! ಅದರ ವಿವರ ತಿಳಿಯುವ ಸಲುವಾಗಿ, ಕುತೂಹಲದಿಂದ ಪತ್ರಿಕೆ ಓದಿದೆ. ಅದರಲ್ಲಿ ಸತ್ತುಹೋದವರ ಹೆಸರಿನ ಪಟ್ಟಿಯಿತ್ತು. ಆ ಪಟ್ಟಿಯಲ್ಲಿ, ತುಂಬೇವನದ ಗೋಪಾಲಸ್ವಾಮಿ ಹೆಸರನ್ನು ನೋಡುತ್ತಲೂ ನನ್ನ ಮನಸ್ಸು ಹೇಗಾಯಿತೆಂಬುದನ್ನು ಹೇಳಲಸಾಧ್ಯ. ತಕ್ಷಣವೇ ಭವಾನಿಯತ್ತ ಹೋಯಿತು ನನ್ನ ಜ್ಞಾನ. ಪಾಪ ! ಆ ಹುಡುಗಿ ಒಂದೇ ವರ್ಷದಲ್ಲಿ ತಾಯಿಯನ್ನೂ ನಲ್ಲನನ್ನೂ ಕಳೆದುಕೊಂಡಳಲ್ಲಾ. ಇನ್ನು ಮುಂದೆ ಅವಳ ಜೀವನದ ಗತಿ ಏನು ಎಂದು ಮರುಗಿದೆ.

ಗೋಪಾಲಸ್ವಾಮಿಯ ಹೆಂಡತಿ ಮಕ್ಕಳ ಯೋಚನೆಯೂ ಬಂದಿತು. ಪಾಪ ! ಅವರ ಆಸ್ತಿಪಾಸ್ತಿಯೆಲ್ಲಾ ಕೋರ್ಟು ವ್ಯವಹಾರದಲ್ಲಿ ಕರಗಿತ್ತು. ಇನ್ನು ಮೇಲೆ ಊಟಕ್ಕೆ ಕೂಡ ಕಷ್ಟಬಂದು ಬಿಟ್ಟಿರಬಹುದು. ಅವರನ್ನು ಒಂದು ಸಲ ನೋಡಿ ಬರೋಣವೆಂದು ಹೋದೆ. ಪಾಪ ! ಅವರ ಪತ್ನಿಯ ದುಃಖ ಅಳುವನ್ನು, ತಂದೆಯಿಲ್ಲದ ಮಕ್ಕಳ ಗೋಳು ನೋಡಲಾಗಲಿಲ್ಲ. ಅವರ ಅಜ್ಜ ಅಜ್ಜಿ ಬಂದು ಮಕ್ಕಳನ್ನು ನೋಡಿಕೊಂಡು, ಮಗಳನ್ನು ಸಮಾಧಾನಮಾಡಿದ್ದರು. ನಾನೂ ನನಗೆ ತೋರಿದ ಸಮಾಧಾನ ಹೇಳಿ ಬಂದೆ.

ಇವರನ್ನು ನೋಡಿದ ಮೇಲೆ, ಭವಾನಿಯನ್ನೂ ನೋಡಬೇಕೆನ್ನಿಸಿತು. ಅಲ್ಲಿಂದ ನೇರವಾಗಿ ಹೊರಟು ಬೇಲೂರನ್ನು ಸೇರಿದೆ. ಅವಳ ಮನೆಗೆ ಹೋಗುವಾಗ ಮನಸ್ಸು ಕಾತರವಾಗಿತ್ತು. ಅಯ್ಯೋ ಪಾಪ ! ಒಂದೇ ಸಮನೆ ಅಳುತ್ತಾಳೋ ಏನೋ ? ಅವಳನ್ನು ನೋಡುವುದಾದರೂ ಹೇಗೆ ? ಅವಳ ಕೈಲಿ ಹೇಗೆ ಮಾತನಾಡಲಿ ? ಹೇಗೆ ಸಮಾಧಾನ ಮಾಡಲಿ ಎಂಬ ಚಿಂತೆ ನನಗೆ. ಆದರೆ ಮನೆಯೊಳಗೆ ಹೋಗಿ ಭವಾನಿಯನ್ನು ನೋಡಿದ ಕೂಡಲೆ ನನ್ನ ಯೋಚನೆಗಳೆಲ್ಲಾ ಮಾಯವಾದವು. ನಾನು ಯೋಚಿಸಿದ್ದಂತೆ ಕಣ್ಣೀರು ಸುರಿಸುತ್ತಾ ಮಲಗಿರಲಿಲ್ಲ ; ಕಂಡಾಗ ಅಳಲಿಲ್ಲ ! ಎಂದಿನ ಭವಾನಿಯೇ ! “ ಬಾ ಅಣ್ಣಾ ! ಕುಳಿತುಕೊ ” ಎಂದು ಪ್ರೀತಿಯಿಂದ ಕರೆದಳು. ಇವಳನ್ನು ನೋಡಿದ ನನ್ನ ಮನಸ್ಸಿನಲ್ಲಿ ಏನೇನೋ ಯೋಚನೆಗಳು. ‘ ಎಷ್ಟಾದರೂ ವೇಶ್ಯೆ. ಕೈಹಿಡಿದ

ಹೆಂಡತಿ ಅಲ್ಲಿ ಪಡುತ್ತಿರುವ ದುಃಖಕ್ಕೂ ಇವಳು ಎಂದಿನಂತೆ ಬಂದವರನ್ನು 'ಬಾ' ಎಂದು ಕರೆದುಕೊಂಡಿರುವುದು ; ಎಷ್ಟು ವ್ಯತ್ಯಾಸ ? ' ಇದನ್ನೆಲ್ಲಾ ನಾನು ಹೊರಗೆ ತೋರಿಸಿಕೊಳ್ಳಲಿಲ್ಲ. ಸುಮ್ಮನೆ ಎರಡು ಒಳ್ಳೆ ಮಾತಾಡಿ ಹೊರಡಲನುವಾದೆ. ಹೊರಡುವಾಗ ಭವಾನಿ "ಅಣ್ಣಾ ! ನವರಾತ್ರಿ ದುರ್ಗಾಷ್ಟಮಿ ದಿನ, ದೇವರ ಸನ್ನಿಧಿಯಲ್ಲಿ ಕಛೇರಿ ನಡೆಸಲು ಹೋಗುತ್ತೇನೆ ; ನೀವೂ ಖಂಡಿತವಾಗಿಯೂ ಬರಬೇಕು " ಎಂದಳು. ಇದನ್ನು ಕೇಳಿ ನನಗೆ ಹೇಗೋ ಆಯಿತು ! ಇಷ್ಟರಲ್ಲೇ ಸಂಗೀತ. " ತಂಗಿ ! ಈ ವರ್ಷ ಸಂಗೀತ ಕಛೇರಿ ಯಾಕಮ್ಮಾ ? ಮುಂದಿನ ವರ್ಷ ಆಗದೆ ? " ಎಂದೆ.

' ಇಲ್ಲ ಅಣ್ಣಾ ! ಕಛೇರಿಗೆ ಮೊದಲೇ ಒಪ್ಪಿಗೆ ಕೊಟ್ಟುಬಿಟ್ಟಿದ್ದೇನೆ. ಉತ್ಸವ ಪತ್ರಿಕೆಯಲ್ಲಿ ಕೂಡ ಹೆಸರು ಬಂದುಬಿಟ್ಟಿದೆ. ಅದನ್ನು ಬದಲಾಯಿಸುವ ಇಷ್ಟವಿಲ್ಲ ' ಎಂದಳು.

" ಅನುಕೂಲವಾದರೆ ಬರುತ್ತೇನಮ್ಮಾ ತಂಗಿ " ಎಂದೆ. ನನಗೆ ಅವಳ ಮೇಲೆ, ದೇವಾಲಯದ ಧರ್ಮದರ್ಶಿಗಳ ಮೇಲೆ ಸಿಟ್ಟು ಬಂತು.

" ಹಾಗೆ ಹೇಳಬಾರದು, ಅಣ್ಣಾ ? ಒಂದು ವೇಳೆ ಇದೇ ನನ್ನ ಕೊನೆಯ ಕಛೇರಿಯಾಗಬಹುದು. ನೀವು ಖಂಡಿತ ತಪ್ಪಿಸಿಕೊಳ್ಳಕೂಡದು " ಎಂದಳು.

ಇದನ್ನು ಕೇಳಿ ನನ್ನ ಮನಸ್ಸು ಕರಗಿ ಹೋಯಿತು. ' ಯಾಕಮ್ಮಾ, ಹಾಗೆ ಹೇಳುತ್ತೀ ? ಯಾವುದು ಹೇಗಾದರೂ ಹೋಗಲಿ. ನಿನ್ನ ಸಂಗೀತ ಮಾತ್ರ ಬೆಳೆಯಬೇಕಮ್ಮ ' ಎಂದು ಮತ್ತೆ ನವರಾತ್ರಿಯಲ್ಲಿ ಖಂಡಿತ ಬರುವುದಾಗಿ ಮಾತುಕೊಟ್ಟು, ಹೊರಟು ಬಂದೆ.

ಭವಾನಿಗೆ ಮಾತುಕೊಟ್ಟಂತೆ ದುರ್ಗಾಷ್ಟಮಿಯ ದಿನ ಬೇಲೂರಿಗೆ ಹೋದೆ. ಅವಳ ಮನೆಗೆ ಹೋದಾಗ ಅವಳು ಕಛೇರಿಗೆ ಹೊರಡುವ ಸಮಯ. ಅವಳನ್ನು ನೋಡಿ ನಾನು ಭ್ರಮಿಸಿಹೋದೆ. ಅವಳು ಆಭರಣ ಅಲಂಕಾರ ಮಾಡಿಕೊಂಡು ಮದುವೆಯ ಹೆಣ್ಣಿನಂತಿದ್ದಳು. ಭವಾನಿ ಮೊದಲೇ ರೂಪವತಿ; ಈಗ ಭೂಲೋಕಕ್ಕೆ ಇಳಿದು ಬಂದ ರಂಭೆಯೋ, ಊರ್ವಶಿಯೋ, ಮೇನಕೆಯೋ ಎನ್ನುವಂತಿದ್ದಳು. ನನ್ನ ಮನಸ್ಸಿನಲ್ಲಾದ ಮೇಗನೆ ಹೇಳತೀರದು.

ನನ್ನನ್ನು ಕಂಡೊಡನೆ ಭವಾನಿ ' ಬಂದಿರಾ ಅಣ್ಣಾ ' ಎಂದಳು ನಸುನಗುತ್ತಾ.

ನನಗೆ ಹೊಟ್ಟೆ ಉರಿಯತೊಡಗಿತು. ಆದರೂ ' ಹೂನಮ್ಮಾ ; ಬಂದೆ ' ಎಂದು ಸಾವಧಾನವಾಗಿ ಉತ್ತರವಿತ್ತೆ.

" ಅಣ್ಣಾ ! ಬೆಳಗಿನಿಂದ ನಿಮ್ಮನ್ನೇ ಇದಿರು ನೋಡುತ್ತಿದ್ದೆ. ಕಛೇರಿ ಮುಗಿದ ಕೂಡಲೇ ಇಲ್ಲಿಗೇ ಬರಬೇಕು. ಮುಖ್ಯವಾದ ಕೆಲಸವಿದೆ ; ತಪ್ಪ ಕೂಡದು ' ಎಂದಳು.

" ಆಗಲಮ್ಮಾ " ಎಂದೆ.

" ನಿಮ್ಮಾಣೆ ; ಖಂಡಿತ ಬರಬೇಕು " ಎಂದು ಹೇಳಿ ಗಾಡಿಯಲ್ಲಿ ಕುಳಿತು ಕೊಂಡಳು.

ಭವಾನಿ ಹೀಗೆ ಮಾತಾಡಿದ್ದು ನಾನು ಕೇಳೇ ಇರಲಿಲ್ಲ. ಏನೋ ವಿಶೇಷ ವಿರಬೇಕು. ಎಲ್ಲಾ ಈ ರಾತ್ರಿ ತಿಳಿಯುತ್ತದೆ ಎಂದುಕೊಂಡು ದೇವಾಲಯಕ್ಕೆ ಹೋದೆ.

ನನ್ನ ಜೀವಮಾನದಲ್ಲಿ ನಾನೂ ಎಷ್ಟೋ ಜನರ ಸಂಗೀತ ಕೇಳಿದ್ದೇನೆ. ಆದರೆ ಆ ದುರ್ಗಾಷ್ಟಮಿಯಂದು ಭವಾನಿ ಹಾಡಿದ ಸಂಗೀತದಂಥದನ್ನು ಮಾತ್ರ ಎಂದೂ ಇಲ್ಲ. ಅವಳ ಕಂಠ ಅಂದು ಬಹು ಮೃದುವಾಗಿತ್ತು. ವೀಣೆಯ ತಂತಿ ಮಿಾಟಿದಾಗ ಅದರಿಂದ ಅಮೃತವಾಣಿ ಚಿಮ್ಮಿತು. ಇದೆಲ್ಲದರ ಜೊತೆಗೆ ಅಂದು ಅವಳ ಹಾಡಿನಲ್ಲಿ ಕೇಳುವವರಲ್ಲಿ ಹರ್ಷವುೂಡಿಸುವ ಏನೋ ಒಂದು ಬಗೆಯ ಅವ್ಯಕ್ತ ಮಾಧುರ್ಯವಿತ್ತು.

ಸಭೆ ನಿಶ್ಶಬ್ದ. ಉಸಿರಿನಶಬ್ದ ಕೂಡ ಕೇಳಿ ಬರುತ್ತಿರಲಿಲ್ಲ. ' ಆಹಾ ' ' ಭೇಷ್ ' ' ಶಾಬಾಸ್ ' ಕೂಗುಗಳೂ ಇಲ್ಲ. ಎಲ್ಲರೂ ಮಂತ್ರಶಕ್ತಿಯಿಂದ ಮೋಹಿತರಾದವರಂತೆ, ಆ ದೈವಿಕ ಸಂಗೀತ ಸವಿಯುತ್ತಿದ್ದರು ಕೊನೆಯಲ್ಲಿ ಅವಳು ಕಾಂಭೋದಿ ರಾಗದ ದೇವರನಾಮ ಹಾಡಿದಾಗ ನಾನು ಗರ್ಭಗುಡಿಯಲ್ಲಿ ರುವ ಅಮ್ಮನವರ ವಿಗ್ರಹ ನೋಡಿದೆ. ಈ ಹಾಡನ್ನು ಕೇಳಿಯೂ ಕೂಡ ಆ ವಿಗ್ರಹ ಕರಗಿ ನೀರಾಗಲಿಲ್ಲವಲ್ಲಾ ಎನಿಸಿತು. ಆದರೆ ಒಂದು ಸಲ ಮಾತ್ರ ನೀರು ತುಳುಕಾಡಿದ ಹಾಗೆ ತೋರಿತು. ಇದೇನು ಭ್ರಮೆ ಎಂದುಕೊಂಡು ನನ್ನ ಕಣ್ಣು ಒರೆಸಿಕೊಂಡು ಸುತ್ತಲಿದ್ದ ಜನರನ್ನು ನೋಡಿದೆ. ಎಲ್ಲರ ಕಣ್ಣೂ ಭವಾನಿಯ ಮೇಲೆ. ಒಂದು ಮೂಲೆಯಲ್ಲಿ ನಿಂತಿದ್ದ ಒಬ್ಬ ಮನುಷ್ಯನ ಮೇಲೆ ನನ್ನ ದೃಷ್ಟಿ ಬಿದ್ದಿತು. ಅರ್ಧ ಹಣೆ ಮುಚ್ಚುವಂಥ ದೊಡ್ಡ ಪೇಟಾ. ಕಣ್ಣಿಗೆ

ಬಿಸಿಲು ಕನ್ನಡಕ ಅವರನ್ನು ಮತ್ತೆ ಮತ್ತೆ ನೋಡಬೇಕೆನ್ನಿಸಿತು. ಎಲ್ಲೋ ನೋಡಿದ ಮುಖ ? ಯಾರಿರಬಹುದು ? ಇದ್ದಕ್ಕಿದ್ದ ಹಾಗೆ ಹೊಳೆಯಿತು ; ಮೈ ಬೆವರಿತು. ಏನೋ ವಿಪರೀತ ನಡೆಯುವುದು ನಿಜ ಎಂದುಕೊಂಡು ಅವರ ಹತ್ತಿರ ಹೋಗಿ ನಿಂತೆ.

ಕಛೇರಿಯೂ ಮುಗಿಯಿತು ! ಎಲ್ಲರಿಗಿಂತ ಮುಂಚೆ ಅವರು ಹೊರಟು ಬಿಟ್ಟರು. ನಾನೂ ಹಿಂಬಾಲಿಸಿದೆ. ಸ್ವಲ್ಪ ದೂರ ಹೋಗುತ್ತಲೂ ನಾನು ಅವರ ಕೈ ಹಿಡಿದುಕೊಂಡು ' ತಮ್ಮಾ ಇದೇನು ವೇಷ? ' ಎಂದೆ. ಹಿಡಿದ ಕೈ ಯನ್ನು ಒದರಿ ತುಂಬೇವನದ ಗೋಪಾಲಸ್ವಾಮಿ "ಯಾರು ಶೇಷಾಚಾರ್ಯರೇ? ಹೌದು ಹೌದು ವೇಷವೇ. ಈ ಪ್ರಪಂಚವೇ ಒಂದು ವೇಷ ; ನೋಡಿದಿರೋ ಇಲ್ಲವೋ ನಿಮ್ಮ ತಂಗಿ ಹಾಕಿದ ವೇಷ ? ಮೊದಲು ಹಾಕಿದ್ದು ಒಂದು ವೇಷ. ಈಗ ಇನ್ನೊಂದು ವೇಷ . '' ಎಂದು ಏನೇನೋ ಹೇಳಲುಪಕ್ರಮಿಸಿ ದರು. ಮಾತಿನಲ್ಲಿ ತುಂಬಾ ಕ್ರೋಧವಿತ್ತು.

' ಇಲ್ಲ ತಮ್ಮಾ ! ನಿನಗೆ ಎಲ್ಲಾ ವಿಷಯ ತಿಳಿದಿಲ್ಲ. ಭವಾನಿ ಈ ದಿನ ನಡೆಸಿದ ಕಛೇರಿ ಕೊನೆಯ ಕಛೇರಿ. ಆದ್ದರಿಂದಲೇ ಈ ದಿನ ಅಷ್ಟು ಆವೇಶ ದಿಂದ ಹಾಡಿದ್ದು ' ಎಂದು ಸಮಾಧಾನ ಹೇಳಿದೆ.

' ಶೇಷಪ್ಪಾ ! ಯಾರ ಹತ್ತಿರ ಮಾತನಾಡುತ್ತಿರುವಿರಿ ? ನನ್ನನ್ನು ಹಸು ಕೂಸೆಂದು ತಿಳಿದಿರಾ ? ಹಾಡಂತೆ ಹಾಡು ! ಕಛೇರಿಯಂತೆ ಕಛೇರಿ ! ಮನಸ್ಸು ಬಂತಲ್ಲಾ ! ನನಗೆ ಬುದ್ಧಿ ಕಲಿಸುವುದಕ್ಕಾಗೇ ದೇವರು ಈ ರೈಲು ಅನಾಹುತ ತಂದಿಟ್ಟ.

ಮಾತನ್ನು ಬದಲಾಯಿಸುವುದಕ್ಕಾಗಿ ನಾನು, 'ಹೌದು ತಮ್ಮಾ ! ನೀನು ಸುಖವಾಗಿ ಇಲ್ಲಿಗೆ ಬಂದು ಸೇರಿದ್ದು ದೇವರ ದಯೆಯೇ ! ಆ ಸಮಾಚಾರ ಸ್ವಲ್ಪ ಹೇಳು ! ಪತ್ರಿಕೆಯಲ್ಲಿ ಹೇಗೆ ತಪ್ಪು ಸುದ್ದಿ ಬಂತು ? ನೀನು ಹೇಗೆ ಬದುಕಿ ಬಂದೆ ? ಇಷ್ಟು ದಿನ ಎಲ್ಲಿದ್ದಿ ? " ಎಂದು ಕೇಳಿದೆ.

" ಅವನ್ನೆಲ್ಲಾ ಆ ಮೇಲೆ ಹೇಳುತ್ತೇನೆ. ಅದರ ಮೇಲೆ ದೊಡ್ಡ ಕಥೆ ಯನ್ನೇ ಬರೆಯಬಹುದು. ಏನೋ ದೇವರ ಕೃಪೆಯಿಂದ ಸತ್ತವನು ಬದುಕಿ ಬಂದೆ. ಹತ್ತು ದಿನ ಪ್ರಜ್ಞೆಯಿಲ್ಲದೆ ಆಸ್ಪತ್ರೆಯಲ್ಲಿ ಬಿದ್ದಿದ್ದೆ. ಆಮೇಲೆ ಹಳೆ

ಪತ್ರಿಕೆಯೊಂದರಲ್ಲಿ ಸತ್ತುಹೋದವರ ಹೆಸರುಗಳ ಪೈಕಿ ನನ್ನ ಹೆಸರು ಇತ್ತು. ಸರಿ ! ನಾನು ಸತ್ತುಹೋದರೆ ನನ್ನ ಜೊತೆಗೇ ತಾವೂ ಚಿತೆಯೇರುವುದಾಗಿ ಹೇಳಿಕೊಳ್ಳುತ್ತಿದ್ದವರೆಲ್ಲಾ ಈಗ ಹೇಗಿದ್ದಾರೋ ನೋಡೋಣವೆನ್ನಿಸಿತು. ಅದ ಕ್ಕಾಗಿ ಈ ವೇಷ ಧರಿಸಿದೆ " ಎಂದರು. ನಾವಿಬ್ಬರೂ ಮಾತನಾಡುತ್ತಾ ಹೋಗುತ್ತಿದ್ದೆವು. ' ಇದೆಲ್ಲಾ ಇರಲಿ ತಮ್ಮಾ ! ಈಗ ಎಲ್ಲಿಗೆ ಹೋಗಬೇಕೆಂ ದಿರುವಿ ? " ಎಂದೆ.

" ಅಲ್ಲಿಗೇ ಹೋಗುತ್ತೇನೆ. ಅವನನ್ನು ಹೊಡೆಯಲಿಕ್ಕಲ್ಲ, ಕೊಲ್ಲಲಿ ಕ್ಕಲ್ಲ ; ಕಥೆಯ ತುಂಬಾ ಚೆನ್ನಾಗಿತ್ತೆಂದು ಹೇಳಿ ಹೋಗಿ ಬಿಡುತ್ತೇನೆ. ಅಷ್ಟೇ; ಬೇಕಾದರೆ ನೀನೂ ಜೊತೆಯಲ್ಲಿ ಬಾ " ಎಂದರು.

ಇಬ್ಬರೂ ಭವಾನಿ ಮನೆ ಸೇರಿದೆವು. ಭವಾನಿ ಗಾಡಿಯಲ್ಲಿ ಬಂದಿದ್ದರಿಂದ ಆವೇಳೆಗಾಗಲೆ ಮನೆ ಸೇರಿದ್ದಳು. ಮೊದಲು ಅವಳನ್ನು ನೋಡಿ ವಿಷಯ ಹೇಳಬೇಕೆಂದಿದ್ದೆ. ಆದರೆ ಗೋಪಾಲಸ್ವಾಮಿ ಅವಕಾಶ ಕೊಡಲಿಲ್ಲ. ನನ್ನನ್ನು ಹಿಂದೆ ಬಿಟ್ಟು ತಾವು ಭವಾನಿಯ ಕೋಣೆಗೆ ನುಗ್ಗಿಬಿಟ್ಟರು. ನಾವು ಹೋದಾಗ ಭವಾನಿ ಒಂದು ಲೋಟದಲ್ಲಿ ಹಾಲೋ ನೀರೋ ಏನೋ ಕುಡಿಯುತ್ತಿದ್ದಳು. ಹಸುರು ಕನ್ನಡಕ, ದಪ್ಪ ರುಮಾಲು ನೋಡಿ ಭವಾನಿ ಒಂದು ನಿಮಿಷ ಹಿಮ್ಮೆ ಟ್ಟಿದಳು. ಗೋಪಾಲಸ್ವಾಮಿ ಕನ್ನಡಕ ರುಮಾಲು ತೆಗೆದು ಹಾಕುತ್ತಲೂ ಅವ ಳ ಮುಖದಲ್ಲಿ ಮೂಡಿದ ಭಯಂಕರ ಬದಲಾವಣೆ ನೋಡಿ ನನ್ನ ಹೃದಯ ಬಡಿ ದುಕೊಳ್ಳಲಾರಂಭಿಸಿತು.

ಎಷ್ಟು ಹೊತ್ತು ಹೀಗೇ ಮೂರು ಜನ ಸ್ತಂಭಿತರಾಗಿದ್ದೆವೆಂದು ತಿಳಿಯದು. ಭವಾನಿಯು ಧಡೀರೆಂದು ನೆಲಕ್ಕೆ ಬಿದ್ದಾಗಲೇ ನನಗೆ ಜ್ಞಾನ ಬಂದಿದ್ದು. ನನ ಗಿಂತ ಮುಂಚೆ ಗೋಪಾಲಸ್ವಾಮಿ ಓಡಿಹೋಗಿ ಅವಳನ್ನು ತೊಡೆಯ ಮೇಲೆ ಮಲಗಿಸಿಕೊಂಡರು. ನಾನು ಡಾಕ್ಟರನ್ನು ಕರೆತರಲು ಓಡಿದೆ. ಡಾಕ್ಟರನ್ನು ಕರೆದು ಕೊಂಡು ಬರುವ ವೇಳೆಗೆ ಭವಾನಿಯ ಪ್ರಾಣ ಈ ಪ್ರಪಂಚವನ್ನು ಬಿಟ್ಟು ಹೋಗಿ ಅರ್ಧಗಂಟೆಯ ಮೇಲಾಗಿತ್ತು.

೬

ಶೇಷಾಚಾರ್ಯರು ಕಥೆ ನಿಲ್ಲಿಸಿದರು. ' ಧಿಢೀರೆಂದು ಕಾಣಿಸಿಕೊಂಡ ಗೋಪಾಲಸ್ವಾಮಿಯನ್ನು ಕಂಡು ಭೂತವೆಂದು ಹೆದರಿ ಪ್ರಾಣ ಬಿಟ್ಟಳೋ

ಏನೋ ' ಎಂದೆ ನಾನು " ಆ ಮೇಲೆ ". " ಆ ಮೇಲೆ ಇನ್ನೇನು ? ಡಾಕ್ಟರ ಕೈಲಿ ಭಯದಿಂದ ಹೃದಯಕ್ರಿಯೆನಿಂತು ಮೃತಳಾದಳೆಂದು ಬರೆಸಿಕೊಂಡೆ. ನಾನೂ ಗೋಪಾಲಸ್ವಾಮಿಯೂ ಮುಂದಿನ ಕೆಲಸಗಳನ್ನೆಲ್ಲಾ ಮಾಡಿ ಮುಗಿಸಿದೆವು. ಪಾಪ ! ಅವರು ಪಟ್ಟ ದುಃಖ ಹೇಳತೀರದು. "

" ಭವಾನಿಯದು ಕಳಂಕರಹಿತ ಮನಸ್ಸು ಎಂದು ಗೋಪಾಲಸ್ವಾಮಿಗೆ ತಿಳಿಯಿತೆ ? ಅವರಲ್ಲಿ ಅವಳಿಗಿದ್ದ ಪ್ರೇಮ ಎಷ್ಟರಮಟ್ಟಿನದೆಂಬುದು ಅವರು ಕೊನೆಗಾದರೂ ತಿಳಿದುಕೊಂಡರೆ ? " ಎಂದು ಕೇಳಿದೆ.

" ಅದು ಹೇಗೆ ತಿಳಿಯುತ್ತೆ ? ಅವರಿಗೆ ಒಂದು ಕಡೆ ಪಶ್ಚಾತ್ತಾಪವಿದ್ದರೂ ಕೂಡ, ಭವಾನಿ ತನ್ನ ದ್ರೋಹವು ಬಯಲಾಯಿತಲ್ಲಾ ಎಂಬ ಭಯದಿಂದ ಸತ್ತುಹೋದಳೆಂದೇ ತಿಳಿದುಕೊಂಡಿದ್ದರು. ಆದರೆ ಕೆಲವು ದಿನಗಳ ನಂತರ ಹೊರಕ್ಕೆ ಬಂದ ಒಂದು ವಿಷಯದಿಂದ ಅವರಿಗೆ ಭವಾನಿಯ ಮೇಲಿದ್ದ ಅಪನಂಬಿಕೆ ಬಹುಮಟ್ಟಿಗೆ ಕಡಿಮೆಯಾಯಿತು. ಭವಾನಿಯು ತನ್ನ ಆಸ್ತಿಯೆಲ್ಲವನ್ನೂ ಗೋಪಾಲಸ್ವಾಮಿಯ ಮಕ್ಕಳ ಹೆಸರಿಗೆ ಬರೆದಿಟ್ಟಿದ್ದಳು. ಉಯಿಲು ವಕೀಲರ ಹತ್ತಿರವಿತ್ತು " ಎಂದರು ಶೇಷಾಚಾರ್ಯರು. ಅವರ ಮುಖವನ್ನು ನೋಡಿದರೆ ಇನ್ನೂ ಏನೋ ವಿಷಯವಿರುವ ಹಾಗೆ ತೋರಿತು.

' ಅದೆಲ್ಲಾ ಸರಿಯೆ. ಡಾಕ್ಟರ ಹತ್ತಿರ ಸರ್ಟಿಫಿಕೇಟ್ ಏಕೆ ತೆಗೆದುಕೊಂಡಿರಿ ? ' ಎಂದು ಕೇಳಿದೆ

" ಈ ತರಹ ದಿಢೀರೆಂದು ಸತ್ತುಹೋದರೆ ಪೋಲೀಸಿನವರು ತರಲೆಮಾಡಿಯಾರಲ್ಲಾ ಎಂತ ! ಆದ್ದರಿಂದ ಡಾಕ್ಟರ ಕೈಲಿ ಸರ್ಟಿಫಿಕೇಟ್ ಬರೆಸಿಕೊಂಡೆ. ಇದರ ರಹಸ್ಯ ನನಗೂ ಡಾಕ್ಟರಿಗೂ ಇಬ್ಬರಿಗೇ ಗೊತ್ತು. ಇದನ್ನು ನಾನು ಗೋಪಾಲಸ್ವಾಮಿಗೆ ಕೂಡ ಹೇಳಲಿಲ್ಲ " ಎಂದರು.

' ಏನೋ ಇನ್ನೂ ಬಾಕಿಯಿರುವಹಾಗಿದೆ. ಅದೇನು ? ' ಎಂದೆ.

" ಇದು ನಡೆದು ೧೫ ವರ್ಷಗಳಾಗಿಹೋಯಿತು. ಇನ್ನು ಮೇಲೆ ಹೇಳಿದರೆ ತಾನೆ ಏನು ? ಭವಾನಿ ನೆಲಕ್ಕೆ ಬೀಳುತ್ತಲೂ ನಾನು ಗೋಪಾಲಸ್ವಾಮಿಯ ಹಿಂದೆಯೇ ಓಡಿ ಹೋದೆ. ಭವಾನಿ ಹಾಲು ಕುಡಿದಿಟ್ಟಿದ್ದ ಬಟ್ಟಲ ಪಕ್ಕದಲ್ಲಿ ಒಂದು ಕಾಗದ. ಅದರ ಮೇಲೆ ನನ್ನ ವಿಳಾಸವಿತ್ತು. ತಕ್ಷಣವೇ ಅದನ್ನು

ತೆಗೆದುಕೊಂಡು ಗೋಪಾಲಸ್ವಾಮಿಗೆ ಕಾಣದ ಹಾಗೆ ಓದಿಕೊಂಡೆ" ಎಂದು ಹೇಳಿ ಶೇಷಾಚಾರ್ಯರು ಒಂದು ಕಾಗದ ಜೇಬಿನಿಂದ ತೆಗೆದು "ಇದೇ ಆ ಕಾಗದ" ಎಂದು ಹೇಳಿ ನನ್ನ ಕೈಗೆ ಕೊಟ್ಟರು. ಆ ಕಾಗದ ತೋರಿಸಿ ಹಿಂದಿನದಾದ್ದರಿಂದ ಬಹಳ ಜೀರ್ಣವಾಗಿ ಹೋಗಿತ್ತು ; ಮೆಲ್ಲಗೆ ಬಿಚ್ಚಿದೆ. ಅದರೊಳಗೆ ದುಂಡಾದ ಅಕ್ಷರದಲ್ಲಿ ಹೀಗೆ ಬರೆದಿತ್ತು :—

'ಪ್ರೀತಿಪಾತ್ರರಾದ ಶೇಷಾಚಾರ್ಯರಿಗೆ ಅವರ ಪ್ರೀತಿಯ ತಂಗಿ ಭವಾನಿಯ ವಿಜ್ಞಾಪನೆ. ನನ್ನ ಪ್ರಾಣೇಶ್ವರನನ್ನು ಕಳೆದುಕೊಂಡು ನಾನು ಬದುಕಿರಲಾರೆ. ಈ ದಿನ ನಾನು ನಡೆಸುವ ಕಛೇರಿಯೇ ಕೊನೆಯದು. ಅವರು ನನಗೆ ಪ್ರೀತಿಯಿಂದ ತೆಗೆದುಕೊಟ್ಟಿದ್ದ ವಜ್ರದುಂಗುರದಿಂದ ವಿಷ ತಯಾರಿಸಿಟ್ಟಿದ್ದೇನೆ. ಕಛೇರಿಯಿಂದ ಬಂದ ಕೂಡಲೆ ಕುಡಿಯುತ್ತೇನೆ. ನನ್ನ ಆಸ್ತಿಯಲ್ಲಿ ಅರ್ಧವನ್ನು ಕೇಶವಸ್ವಾಮಿ ದೇವಾಲಯಕ್ಕೂ, ಅರ್ಧವನ್ನು ಗೋಪಾಲಸ್ವಾಮಿಯ ಮಕ್ಕಳಿಗೂ ಬರೆದಿದೇನೆ. ಉಯಿಲು ವಕೀಲ ಶಂಕರರಾಯರ ಹತ್ತಿರವಿದೆ. ನಾನು ಮಾಡಿರುವ ಕೆಲಸ ತಪ್ಪಾಗಿದ್ದರೆ ದಯವಿಟ್ಟು ಕ್ಷಮಿಸಿ. ಅವರನ್ನಗಲಿ ಬದುಕಿರುವುದು ನನ್ನಿಂದಾಗದು

ಇತಿ,

"ಭವಾನಿ"

ಈ ಕಾಗದವನ್ನು ೨-೩ ಸಲ ಓದಿ ಬಿಟ್ಟು 'ಇದನ್ನು ಗೋಪಾಲಸ್ವಾಮಿಗೆ ಏಕೆ ತಿಳಿಸಲಿಲ್ಲ ?' ಎಂದು ಕೇಳಿದೆ.

"ಹೇಳಿ ಏನು ಲಾಭ ? ಮೊದಲೇ ಅವರಿಗೆ ತುಂಬಾ ದುಃಖವಾಗಿತ್ತು. ಇದು ತಿಳಿದಿದ್ದರೆ ಅವರೂ ಪ್ರಾಣತ್ಯಾಗ ಮಾಡುತ್ತಿದ್ದರೋ ಏನೋ ? ಅಲ್ಲದೆ ಅವರ ಹೆಂಡತಿ ಮಕ್ಕಳಮೇಲೆ ಪ್ರೀತಿ ಹೋಗಿಬಿಟ್ಟರೂ ಬಿಡಬಹುದು. ಆದ್ದರಿಂದ ಒಂದು ಸಂಸಾರವನ್ನು ಅನ್ಯಾಯವಾಗಿ ಕೆಡಿಸಬಾರದೆಂದು ಇದನ್ನೆಲ್ಲ ಹೇಳಲಿಲ್ಲ" ಎಂದರು. ಸ್ವಲ್ಪ ಹೊತ್ತು ಸುಮ್ಮನಿದ್ದು 'ನಾನು ಬರುತ್ತೇನಪ್ಪಾ !' ಎಂದು ಶೇಷಾಚಾರ್ಯರು ಎದ್ದು ನಿಂತರು. ಕಾಗದ ಅವರ ಕೈಗೇಕೊಟ್ಟೆ.

ಬಾಗಿಲು ತೆಗೆದುಕೊಂಡು ಅವರು ಹೊರಗೆ ಹೊರಟು ಹೋದರು. ಛಿಲ್ಲೆಂದು ಚಳಿಗಾಳಿ ಒಳಗೆ ಚಿಮ್ಮಿತು. ಮಳೆಯೂ ಸಣ್ಣಗೆ ಹನಿಯುತ್ತಿತ್ತು.

---

# * " ಮೂರು ತಿಂಗಳ ತುರಂಗವಾಸ "

## ೧ ನನ್ನೊಡನೆ ಬರಬೇಕು !

" ನಿಮ್ಮನ್ನು ಭಾರತ ರಕ್ಷಣಾ ಶಾಸನದ ಪ್ರಕಾರ ಬಂಧಿಸುವೆನು ; ನನ್ನೊಡನೆ ಬರಬೇಕು ! ''

ಹೀಗೆ ಹೇಳಿದವರು ಮಾಯಾವರದ ಪೋಲೀಸ್ ಸರ್ಕಲ್ ಇನ್ಸ್ಪೆಕ್ಟರ್. ಈ ಮಾತು ಕಿವಿಯಲ್ಲಿ ಬೀಳುತ್ತಲೂ ಒಂದು ಅದ್ಭುತವಾದ, ಆನಂದವಾದ ಕನಸಿನಿಂದ ಎಚ್ಚೆತ್ತೆ. ಎತ್ತರವಾದ ಮೇಜಿನ ಮೇಲೆ ನಿಂತಿದ್ದವನು ಮೆಲ್ಲನೆ ಕೆಳಕ್ಕಿಳಿದೆ. ಸುತ್ತಲೂ ಕುಳಿತಿದ್ದ ಸಾವಿರಾರು ಜನರು ಸ್ವಲ್ಪ ಹೊತ್ತು ಏಳದೇ ಇರಬೇಕಲ್ಲಾ, ಎದ್ದು ಬಿಟ್ಟರೆ ಅಲ್ಲೋಲ ಕಲ್ಲೋಲವಾಗಿ ಬಿಡುವುದಲ್ಲಾ ಎಂದು ನನ್ನ ಎದೆ ಒಂದು ಕ್ಷಣ ನಡುಗಿತು. ಸದ್ಯ, ಒಬ್ಬರೂ ಏಳಲಿಲ್ಲ. ಸರ್ಕಲ್ ಇನ್ಸ್‌ಸ್ಪೆಕ್ಟರೊಡನೆ ನಿದ್ದೆಯಲ್ಲಿ ನಡೆಯುವ ಹಾಗೆ ನಡೆದುಕೊಂಡು ಹೊರಟೆ. ಗುಂಪನ್ನೆಲ್ಲಾ ದಾಟಿ ಆಚೆಗೆ ಹೋಗುತ್ತಲೇ, ಅಲ್ಲಿ ನಿಂತಿದ್ದ ಜಟಕಾಗಾಡಿಯೊಂದರಲ್ಲಿ ನನ್ನನ್ನು ಕುಳಿತುಕೊಳ್ಳುವಂತೆ ಹೇಳಿದರು. ಕುಳಿತುಕೊಂಡೆ ; ಇನ್ಸ್ಪೆಕ್ಟರೂ ಹತ್ತಿ ಕುಳಿತರು. ಗಾಡಿಯು ಹೊರಟಿತು.

ಆಗ ಗುಂಪಿನಿಂದ ದೊಡ್ಡ ಜಯಘೋಷವು ಹೊರಟಿತು. ಅಷ್ಟು ಹೊತ್ತೂ ಗಂಭೀರವಾಗಿ ಕುಳಿತಿದ್ದ ಜನ ಎದ್ದು ನಿಂತರು. ಏಳೆಂಟು ಸಾವಿರ ಕಂಠಗಳಿಂದ "ಮಹಾತ್ಮಾ ಗಾಂಧೀಕೀ ಜೈ ! '' ಎಂಬ ಜಯಘೋಷವು ಒಂದೇ ಸಲ ಹೊರಟಿತು. ಆದರೆ ಅವರು ಯಾರೂ ಗಾಡಿಯನ್ನು ಹಿಂಬಾಲಿಸಲಿಲ್ಲ.

" ಅಹಾ ನಮ್ಮ ಜನಗಳು ಎಷ್ಟರಮಟ್ಟಿಗೆ ಶಿಸ್ತು ಕಲಿತುಬಿಟ್ಟರು ? " ಎಂದುಕೊಂಡೆ. ಅವರ ಜಯಘೋಷದಿಂದ ಕಳೆದ ಅರ್ಧ ಗಂಟೆಯಲ್ಲಿ ನಾನು ಅನುಭವಿಸಿದ ಆಶ್ಚರ್ಯವಾದ—ಅದ್ಭುತವಾದ ಅನುಭವಗಳೆಲ್ಲವೂ ಕನಸಲ್ಲದೆ ನಿಜವೆಂಬ ಭಾವನೆಯುಂಟಾಯಿತು.

ಹೌದು ; ಕಳೆದ ಅರ್ಧ ಗಂಟೆಗೆ ಮುಂಚೆಯೇ ನನಗೆ ಅಪೂರ್ವ ಅನುಭವವುಂಟಾಗಿದ್ದು. ಮಾಯಾವರದ ದೊಡ್ಡ ಬೀದಿಯಲ್ಲಿರುವ ಸ್ನೇಹಿತರೊಬ್ಬರ

* [ ರಾ. ಕೀ. ಯವರ ತಮಿಳು ಲೇಖನದ ಅನುವಾದ ]

ಮನೆಯಿಂದ ಚಿಕ್ಕ ಅಂಗಡಿ ಬೀದಿಯ ಮಾರ್ಗವಾಗಿ ಹೊರಟೆ-ಕಾಲ್ನಡಿಗೆಯಿಂದ. ನಾನು ಹೊರಟ ಮಾರ್ಗದಲ್ಲಿಯೇ ಮಿತ್ರರು ಕೆಲವರು ಕೂಡಿದ್ದರು. ಮುಂದಕ್ಕೆ ಹೋಗುತ್ತಾ ಹೋಗುತ್ತಾ ಗುಂಪು ಜಾಸ್ತಿಯಾಗುತ್ತಿತ್ತು. ದಾರಿಯಲ್ಲಿದ್ದ ವಿನಾಯಕ ದೇವಾಲಯದ ಬಳಿ ಸ್ವಲ್ಪ ಹೊತ್ತು ನಿಂತೆ. ಅರ್ಚಕರು ಮಂಗಳಾ ರತಿ ಮಾಡಿದರು. "ಭಗವಂತಾ ; ನನ್ನನ್ನು ಹೆಚ್ಚಾಗಿ ಶಿಕ್ಷಿಸಕೂಡದು. ಇಂದಿನ ರಾತ್ರಿ ಊಟ ಸರ್ಕಾರದ ಖರ್ಚಿನಲ್ಲೇ ಆಗಬೇಕು" ಎಂದು ಬೇಡಿಕೊಂಡೆ. ನಾನು ಚಿಕ್ಕ ಅಂಗಡಿ ಬೀದಿ ಕೊನೆ ಮುಟ್ಟುವ ವೇಳೆಗೆ, ಸಾವಿರಾರು ಜನರು ಸೇರಿಬಿಟ್ಟರು. ಅವರುಗಳ ಮಧ್ಯೆ ದಾರಿಮಾಡಿಕೊಂಡು ನಿರ್ದಿಷ್ಟ ಸ್ಥಳಕ್ಕೆ ಹೋಗಿ ಸೇರುವುದು ಬಹಳ ಪ್ರಯಾಸವಾಗಿ ಬಿಟ್ಟಿತು. ಹೋಗಿ ಸೇರಿದ ಮೇಲೆ ತಾನೆ ಏನು ? ಅಷ್ಟೊಂದು ಜನರು ಸೇರಿಕೊಂಡು ಕೂಗಾಡುತ್ತಿರುವಾಗ ನಾನು ಮಾತನಾಡಿದರೆ ಯಾರಿಗೆ ಕೇಳಿಸಬೇಕು ? " ಹೇಗಪ್ಪಾ ಈ ಗಲಾಟೆ ತಡೆಯು ವುದು " ಎಂದು ಒದ್ದಾಡಿದೆ. ಆಗ ನನ್ನ ಮಿತ್ರರು ಶ್ರೀ ನಾರಾಯಣಸ್ವಾಮಿ ನಾಯಡುರವರು ನನ್ನ ಸಹಾಯಕ್ಕೆ ಬಂದರು. ಒಂದು ಎತ್ತರವಾದ ಮೇಜನ್ನು ಎಲ್ಲಿಂದಲೋ ತಂದು ಹಾಕಿದರು. ಅದರ ಮೇಲೆ ನಿಂತುಕೊಳ್ಳುವಂತೆ ನನಗೆ ಹೇಳಿದರು.

ಮೇಜಿನ ಮೇಲೆ ಹತ್ತಿ ನಿಂತು ಆ ಜನ ಸಂದಣಿಯನ್ನು ನೋಡಿ ನನ್ನ ಮನಸ್ಸಿನಲ್ಲಿ ಒಂದು ವಿಧವಾದ ಬದಲಾವಣೆಯುಂಟಾಯಿತು. ಅಷ್ಟು ಜನರ ಹೃದಯವೂ ನನ್ನ ಹೃದಯದೊಡನೆ ಸೇರಿರುವ ಹಾಗೆ ತೋರಿತು. " ದೇಹ ಗಳು ಬೇರೆ ಬೇರೆಯಾದರೂ ಅದರಲ್ಲಿ ವಾಸಿಸುವ ಆತ್ಮವು ಒಂದೇ " ಎಂಬ ವೇದ ವಾಕ್ಯವು ನೆನಪಿಗೆ ಬಂದಿತು. ಸತ್ಯಾಗ್ರಹವನ್ನು ನಾನು ಮಾತ್ರ ಮಾಡು ತ್ತಿಲ್ಲ ; ಇಲ್ಲಿ ಸೇರಿರುವ ೭-೮ ಸಾವಿರ ಜನರೂ ನನ್ನ ಮೂಲಕ ಸತ್ಯಾಗ್ರಹ ಮಾಡುತ್ತಿರುವರು ಎಂಬ ಭಾವನೆ ತೋರಿತು. ಗುಂಪಿನಲ್ಲಿ ಅನೇಕ ಜನರ ಕಂಗಳಲ್ಲಿ ನೀರು ತುಂಬಿಕೊಂಡಿರುವುದನ್ನು ನೋಡಿದೆ ; ಎಂದೂ ಇಲ್ಲದ್ದು ನನ್ನ ಕಣ್ಗಳಲ್ಲಿಯೂ ನೀರು ತುಂಬಿ ಬಂದಿತು. ದುಃಖದಿಂದ ಗಂಟಲು ಕಟ್ಟಿಕೊಂ ಡಿತು. ನಾನು ಹೇಳಬೇಕೆಂದಿರುವುದನ್ನೆಲ್ಲಾ ಹೇಳಲಾಗುತ್ತದೆಯೋ ಇಲ್ಲವೋ ಎಂದು ಒಂದು ಕ್ಷಣ ದಿಗಿಲುಬಿದ್ದೆ. ಹೀಗಾಗಬಹುದೆಂದೆಣಿಸಿ ಮೊದಲೇ ನಾನು ಹೇಳಬೇಕಾದ ಮಾತುಗಳನ್ನು ಒಂದು ಚೀಟಿಯಲ್ಲಿ ಬರೆದುಕೊಂಡು ತಂದಿದ್ದೆ.

ಆದರೆ ಈಗ ನನ್ನ ಕೈ ಚೀಲದಲ್ಲಿ ನೋಡಿದಗೆ ಆ ಕಾಗದವೇ ಇಲ್ಲ. ಆ ಗುಂಪಿನಲ್ಲಿ ಎಲ್ಲಿಯೋ ಬಿದ್ದು ಹೋಗಿರಬೇಕು. ಪಕ್ಕದಲ್ಲಿದ್ದ ಮಿತ್ರರಿಂದ ಒಂದು ಕಾಗದವನ್ನೂ ಪೆನ್ನನ್ನೂ ತೆಗೆದುಕೊಂಡೆ. ಅವಸರ ಅವಸರವಾಗಿ ಮಾತುಗಳನ್ನು ಜ್ಞಾಪಕಮಾಡಿಕೊಂಡು ಕಾಗದಲ್ಲಿ ಬರೆದೆ. ಬೆರಳು ನಡುಗಿದವು; ಪೆನ್ನು ಅಲ್ಲಾಡಿತು; ಹೇಗೋ ಬರೆದು ಮುಗಿಸಿದೆ. ಆ ವೇಳೆಗೆ ಶ್ರೀ ನಾರಾಯಣಸ್ವಾಮಿನಾಯಡುರವರು ತಮ್ಮ ದಪ್ಪ ಗಂಟಲಿನಲ್ಲಿ ಬೇಡಿಕೊಂಡು ಅಷ್ಟು ಜನರನ್ನೂ ಕುಳ್ಳಿರಿಸಿದರು. ಕಾಗದದಲ್ಲಿ ಬರೆದಿದ್ದನ್ನು ಬಹು ಪ್ರಯಾಸದಿಂದ ಓದಿ ಮುಗಿಸಿದೆ. ಓದುವಾಗಲೇ, "ದೇವರ ಕೃಪೆ! ಗಂಟಲು ಕಟ್ಟಿಕೊಳ್ಳದೆ ಮಾತು ನಡುಗದೆ ಸ್ಪಷ್ಟವಾಗಿ ಉಚ್ಚಾರವಾಗುತ್ತಿದೆಯಲ್ಲಾ" ಎಂಬ ಸಂತೋಷವೂ, "ಆಹಾ! ಜನರು ಎಷ್ಟು ನಿಶ್ಶಬ್ದವಾಗಿರುವರು" ಎಂಬ ಹೆಮ್ಮೆಯೂ ಉಂಟಾಯಿತು. ಆ ನಾಲ್ಕೈದು ವಾಕ್ಯಗಳನ್ನು ಓದಿ ಮುಗಿಸಿದ ಕೂಡಲೆ ಒಂದು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದಂತಾಯಿತು.

ಮೇಲೆ ಹೇಳಿದಂತೆ ಪೋಲೀಸಿನವರು ನನ್ನನ್ನು ಕರೆದುಕೊಂಡು ಹೋಗಿ ಜಟಕಾಗಾಡಿಯಲ್ಲಿ ಕುಳ್ಳಿರಿಸುವವರೆಗೂ ಗುಂಪಿನ ಜನಗಳಲ್ಲಿ ಒಬ್ಬರಾದರೂ ಏಳಲಿಲ್ಲ. ಗಲಾಟೆಯನ್ನೂ ಮಾಡಲಿಲ್ಲ.

ಗಾಡಿಯಲ್ಲಿ ಪೋಲೀಸ್ ಸ್ಟೇಷನನ್ನು ಸೇರುವವರೆಗೂ ಮೇಲೆ ಹೇಳಿದ ಆತ್ಮಾನುಭವವು ನನಗೆ ಪುನಃ ಪುನಃ ನೆನಪಿಗೆ ಬಂದು, ಆ ಸಮಯದಲ್ಲಿ ಮಹಾ ಜನಗಳಿಗೂ ನನಗೂ ಉಂಟಾಗಿದ್ದ ಐಕ್ಯ ಭಾವನೆಯನ್ನು ನೆನಸಿ ನೆನಸಿ ಆನಂದ ವುಕ್ಕುತ್ತಿತ್ತು. ಅಷ್ಟು ಜನರೂ ದೇಹದಿಂದ ನನ್ನನ್ನು ಹಿಂಬಾಲಿಸಿ ಬರದಿದ್ದರೂ ಮನಸ್ಸಿನಿಂದ ನನ್ನನ್ನು ಹಿಂಬಾಲಿಸುತ್ತಿರುವರೆಂದೇ ನಾನು ಭಾವಿಸಿಕೊಂಡೆ.

ಪೋಲೀಸ್ ಸ್ಟೇಷನ್ ಬಂತು. ಇನ್ಸ್‌ಪೆಕ್ಟರು ನನ್ನನ್ನು ಒಳಕ್ಕೆ ಕರೆದೊಯ್ದರು. ತಮ್ಮ ಮೇಜಿನ ಹತ್ತಿರವೇ ನನ್ನನ್ನೂ ಕುಳಿತುಕೊಳ್ಳುವಂತೆ ಹೇಳಿದರು. ನನ್ನ ಅಂಗಾಂಗ ವಿವರಗಳನ್ನೆಲ್ಲಾ ಗುರುತುಮಾಡಿಕೊಂಡರು. ೨ ಕಿವಿ, ಒಂದು ಮೂಗು, ಕೆನ್ನೆಗಳಲ್ಲಿ ೨ ಮಚ್ಚೆಗಳು, ಕತ್ತಿನಲ್ಲಿ ಒಂದು ಮಚ್ಚೆ, ಎಂದೆಲ್ಲಾ ಬರೆದುಕೊಂಡರು. ಆಮೇಲೆ ನನ್ನೊಡನಿದ್ದ ಸಾಮಾನುಗಳನ್ನೆಲ್ಲಾ ಪಟ್ಟಿ ಬರೆಯ ತೊಡಗಿದರು. ಒಂದು ಪಂಚೆ, ಒಂದು ಚೀಲ, ಒಂದು

ಅಂಗವಸ್ತ್ರ, ಒಂದು ಸ್ವದೇಶೀ ಫೌನ್‌ಟನ್‌ಪೆನ್, ಒಂದು ಚೂರು ಕಾಗದ ( ತುದಿಯಲ್ಲಿ ಹರಿದು ಹೋಗಿದ್ದು ) ಈ ರೀತಿ ಒಂದು ಪಟ್ಟಿ ತಯಾರಿಸಿದರು.

"ಏನ್ಸಾರ್ ಮಾಡುವುದು ? ಆಮೇಲೆ ಆ ಸಾಮಾನು ಇಲ್ಲ; ಈ ಸಾಮಾನು ಇಲ್ಲ ; ಎಂದು ಗಲಾಟೆಮಾಡುತ್ತಾರೆ. ನಮ್ಮ ಪಾಡು ನಾಯಿಪಾಡು" ಎಂದರು.

" ನಿಜ, ನಿಜ, ಇನ್ಸ್ಪೆಕ್ಟರೇ ! ಹಾಗಾದರೆ ನನ್ನ ಅಂಗವಸ್ತ್ರದಲ್ಲಿರುವ ೩ ಗೆರೆಗಳನ್ನೂ ಪಟ್ಟಿಯಲ್ಲಿ ನೇರಿಸಿಕೊಳ್ಳಿ. ಅವೆಲ್ಲವನ್ನೂ ಸರಿಯಾಗಿ ವಾಪ್ಸು ಮಾಡದಿದ್ದರೆ ಸುಮ್ಮನೆ ಬಿಡುವುದಿಲ್ಲ " ಎಂದೆ.

ಇನ್ಸ್ಪೆಕ್ಟರು ಇದನ್ನು ಗಮನಿಸದೆ ಬಾಗಿಲ ಕಡೆ ನೋಡುವುದನ್ನು ನೋಡಿದೆ. ಅಲ್ಲಿ ಕೆಲವರು ಈ ವೇಳೆಗೆ ಕೂಡಿಬಿಟ್ಟಿದ್ದರು. ಶ್ರೀ ಚಿನ್ನಯ್ಯ ಪಿಳ್ಳೆ ಗಾಡಿಯಿಂದ ಇಳಿಯುತ್ತಿದ್ದರು. ನಮ್ಮ ಜಟಕಾ ಹಿಂದೆಯೇ ಅವರೂ ಬಂದಿರಬೇಕು. " ಅಯ್ಯೋ ! ಪೋಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋಗುವರಲ್ಲಾ ! ಅಲ್ಲಿ ಒಬ್ಬನೇ ಇದ್ದರೆ ಭಯಪಟ್ಟು ಕೊಳ್ಳುತ್ತೀನೋ " ಎಂದುಕೊಂಡು ಶ್ರೀ ಚಿನ್ನಯ್ಯ ಪಿಳ್ಳೆ ಹಾಗೆ ಓಡಿ ಬಂದಿರುವರು. " ಆಹಾ ! ಈ ಮಿತ್ರರ ಪ್ರೇಮಕ್ಕೆ ಏನು ಹೇಳಲಿ ? " ಎಂದುಕೊಂಡೆ.

## ೨ ಪ್ರೀತಿಯೂ, ಆಶೆಯೂ

ನನ್ನನ್ನು ಸೆರೆಮನೆಗೆ ಕಳುಹಿಸುವ ವಿಷಯವಾಗಿ ನನ್ನ ಸ್ನೇಹಿತರುಗಳು ತೋರಿಸಿದ ಅಪಾರ ದುಃಖವನ್ನು ನೆನಸಿಕೊಂಡರೆ ಈಗಲೂ ನನ್ನ ಹೃದಯ ಸಂತೋಷಹೊಂದುವುದು.

ಹೋದ ವರ್ಷ ಡಿಸೆಂಬರ್‌ನಲ್ಲಿ ನನಗೆ ಒಂದು ಅದೃಷ್ಟ ಪ್ರಾಪ್ತಿಯಾಯಿತು. ಅದೇನೆಂದರೆ:—ರಾಜಾಜಿ, ರಾಜೇಂದ್ರ ಪ್ರಸಾದ್, ಲಾರ್ಡ್ ಬೀವರ್ ಬ್ರೂಕ್ ಮೊದಲಾದ ಪ್ರಮುಖರುಗಳಿಗೇ ಬಂದಂಥ ' ಆಸ್ತಮಾ ', ಈ ಬಡವನನ್ನೂ ಹುಡುಕಿಕೊಂಡು ಬಂದಿತು. ಸ್ವಲ್ಪ ಕೆಮ್ಮು-ಕೆಲವು ದಿನ ಹಗಲು ರಾತ್ರಿ ಎಡೆಬಿಡದೆ ಹಿಂಸೆ ಕೊಟ್ಟಿತು. ಮಲಗಿಕೊಳ್ಳುವುದಕ್ಕೇ ಆಗದು ; ನಿದ್ರೆಯೇ ಇಲ್ಲ. ಇಂತಹ ಸ್ಥಿತಿಯಲ್ಲಿದ್ದ ನನ್ನನ್ನು ನೋಡಿದ್ದ ಆ ಪ್ರೀತಿಯಗೆಳೆಯರಾದರೂ, "ನಿನಗೆ ಮೈಯಲ್ಲೇ ಹುಷಾರಿಲ್ಲವಲ್ಲಾ? ಈಗ ಸೆರೆಮನೆಗೆ ನೀನೇತ

ಕ್ಕಾಗಿ ಹೋಗಬೇಕು ' ಎಂದು ಕೇಳಬೇಕಲ್ಲಾ ? ಊಹು ಒಬ್ಬರೂ ಕೇಳಲಿಲ್ಲ ! ಹೇಗಾದರೂ ನನ್ನ ಮೈಯನ್ನು ಸ್ವಸ್ಥಪಡಿಸಿ ನಿರ್ದಿಷ್ಟದಿನ ಸೆರೆಮನೆಗೆ ಕಳುಹಿಸಿಯೇ ಕಳುಹಿಸುವರೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿತ್ತು.

ಕೆಲವರು ಔಷಧಿ ಹೇಳಿದರು: ಕೆಲವರು ಈ ವ್ಯಾಧಿಯನ್ನು ಗುಣಪಡಿಸಲೋಸುಗವೇ ಹುಟ್ಟಿರುವ ವೈದ್ಯರ ಹೆಸರನ್ನು ಹೇಳಿದರು. ಇನ್ನೂ ಕೆಲವರು ವೈದ್ಯರನ್ನು ಕರೆದುಕೊಂಡು ಬಂದುಬಿಟ್ಟರು.

ಒಬ್ಬ ಮಿತ್ರರು ಯಾವುದೋ ಒಂದು ಔಷಧಿ ಬೇರಿನ ಹೆಸರನ್ನು ಹೇಳಿ, " ಅದನ್ನು ತರಿಸಿ ಸುಟ್ಟುಬಿಟ್ಟು ಭಸ್ಮಮಾಡಿ ಜೇನು ತುಪ್ಪದಲ್ಲಿ ಕಲೆಸಿ ೫ ಸಲ ತಿಂದು ನೋಡಿ. ಕೆಮ್ಮು ಓಡಿಹೋಗುವುದೋ, ಇಲ್ಲವೋ, ನೋಡಿ " ಎಂದರು ಮತ್ತು ರಹಸ್ಯವಾಗಿ ಕಿವಿಯಲ್ಲಿ, "ಈ ಔಷಧಿಯನ್ನು ಇಟ್ಟುಕೊಂಡಿರುವುದರಿಂದಲೇ ಡಾಕ್ಟರ್ ಶೋಣಾಚಲಂ ಊರನ್ನೇ ಕೊಳ್ಳೆಹೊಡೆಯುತ್ತಿರುವುದು" ಎಂದರು.

ನನ್ನಲ್ಲಿ ಅತಿಶಯವಾದ ಪ್ರೀತಿಯಿಟ್ಟಿದ್ದ ಮಿತ್ರರೊಬ್ಬರು ಪ್ರಸಿದ್ಧಿಹೊಂದಿದ್ದ ಮಲೆಯಾಳ ಆಯುರ್ವೇದ ವೈದ್ಯರೊಬ್ಬರನ್ನು ಜೊತೆಯಲ್ಲೇ ಕರೆದುಕೊಂಡು ಬಂದರು. ಆ ವೈದ್ಯರು ನನ್ನನ್ನು ನೋಡಿ, " ೬ ತಿಂಗಳು ಔಷಧಿ ಸೇವಿಸಬೇಕು ; ವಾರಕ್ಕೆ ೩ ಸಲ ತೈಲಸ್ನಾನಮಾಡಬೇಕು ; ಚೆನ್ನಾಗಿ ಕುದಿದು ಆರಿಸಿದ ನೀರಲ್ಲಿ.......... '' ಎಂದು. ಎಂದು ಹೇಳತೊಡಗಿದರು, ಅಷ್ಟಕ್ಕೇ ಅವರನ್ನು ನಿಲ್ಲಿಸಿ ನನ್ನ ಮಿತ್ರರು, '' ಜನವರಿ ೨೧ ನೇ ತಾ|| ಇವರು ಜೈಲಿಗೆ ಹೋಗುತ್ತಾರೆ. ಅದರೊಳಗೆ ಗುಣವಾಗಬೇಕು. " ಎಂದರು.

'' ಹಾಗೋ ? ಮುಂಚೆಯೇ ಹೇಳುವುದಕ್ಕಿಲ್ಲವೇ ? ಮೂರೇ ದಿನಗಳಲ್ಲಿ ಗುಣಪಡಿಸುವ ಔಷಧಿಯನ್ನು ಕಳಿಸುವೆನು " ಎಂದರು ವೈದ್ಯರು.

ಇನ್ನೊಬ್ಬ ಮಿತ್ರರು ತಿರುಚನಾಪಳ್ಳಿಗೆ ಟೆಲಿಫೋನ್ ಮಾಡಿ, ಅಲ್ಲಿಂದ "ಆಸ್ತಮಾ ಸ್ಪೆಷಲಿಸ್ಟ್ " ಒಬ್ಬರನ್ನು ರಾತ್ರಿಯೇ ಹೊರಟು ಬರುವಂತೆ ಮಾಡಿದರು. ಡಾಕ್ಟರು ಬರುತ್ತಿರುವಾಗಲೇ, ''ಇಷ್ಟೇ ತಾನೇ ? ಜನವರಿ ೨೧ ತಾ|| ನ ದಿನ ಇವರನ್ನು ಜೈಲಿನೊಳಕ್ಕೆ ಸೇರಿಸುವ ಭಾರ ನನ್ನದು. ನೀವು ಸ್ವಲ್ಪವೂ ಯೋಚನೆಮಾಡಬೇಡಿ ? ಎಂದು ಹೇಳಿಕೊಂಡೇ ಬಂದರು.

ಇಷ್ಟಕ್ಕೂ ಈ ಡಾಕ್ಟರು ನನಗೆ ಗುರುತೇ ಇಲ್ಲ. ಇವರಿಗೆ ಉಪಕಾರವಾಗಲೀ, ಅಪಕಾರವಾಗಲೀ, ನಾನು ಮಾಡಿದ್ದೇ ಇಲ್ಲ. ಮತ್ತೆ ಯಾತಕ್ಕಾಗಿ ಇವರು ನನ್ನನ್ನು ಜೈಲಿಗೆ ಸೇರಿಸಲು ಇಷ್ಟು ಆತುರವುಳ್ಳವರಾಗಿರುವರು ?

ನನ್ನನ್ನು ನೋಡಿದ್ದೇ ಅವರು. "ಓಹೋ, ಅಸ್ತಮಾವೆಂದು ಹೇಳಿ ತಪ್ಪಿಸಿಕೊಳ್ಳಲು ನೋಡುತೀರೋ ! ಇದೆಲ್ಲಾ ನಡೆಯುವುದಿಲ್ಲ ಸಾರ್ ! ಆರು ಇನ್‌ಜೆಕ್ಷನ್‌ಗಳಲ್ಲಿ ನಿಮ್ಮನ್ನು ಸರಿಪಡಿಸಿ, ಜೈಲೊಳಕ್ಕೆ ನಿಮ್ಮನ್ನು ನಿರ್ದಿಷ್ಟ ದಿವಸದಲ್ಲಿ ಸೇರಿಸದೇ ಹೋದರೆ...... " ಎಂದು ಹೇಳಿಕೊಂಡೇ ಸೂಜಿಯನ್ನೂ ಬೆಂಕಿಪೊಟ್ಟಣವನ್ನೂ ತೆಗೆದರು.

ನಾನು ಇದ್ದದು ಮಸ್ರಾಸಿನಲ್ಲಿ ; ಅವರು ತಿರುಚನಾಪಳ್ಳಿಯಲ್ಲಿದ್ದರು ; ಮಾಯಾವರದಲ್ಲಿ ೨೧ ನೇ ತಾ॥ ಸತ್ಯಾಗ್ರಹ. ಬಾಕಿ ಇದ್ದ ದಿನಗಳು ೧೩. ಇಷ್ಟರೊಳಗೆ ೬ ಇನ್‌ಜೆಕ್ಷನ್ನುಗಳನ್ನು ಕೊಡಬೇಕು. ಅಂತೂ ಹಟದಿಂದ ಅವರು ಆ ೧೩ ದಿನಗಳಲ್ಲಿ ನನ್ನನ್ನು ೬ ಸಲ ಹಿಡಿದುಕೊಂಡು ಸೂಜಿಯನ್ನು ಚುಚ್ಚಿಯೇ ಬಿಟ್ಟರು. ಬ್ರಿಟಿಷ್ ಸರಕಾರದ ಮೇಲೆ ಅವರಿಗಿದ್ದ ಕೋಪವನ್ನೆಲ್ಲಾ ನನ್ನ ಮೈ ಚುಚ್ಚುವುದರಲ್ಲೇ ತೀರಿಸಿಕೊಂಡಂತೆ ತೋರಿತು. ಹೇಗೋ ಅಂತೂ ಅವರು ಮಾತುಕೊಟ್ಟಂತೆ ೨೧ ನೇ ತಾ॥ ನೊಳಗೆ ಕೆಮ್ಮಲನ್ನು ಹೋಗಲಾಡಿಸಿ ೨೨ ನೇ ಬೆಳಿಗ್ಯೆ ಸೆರೆಮನೆ ಬಾಗಿಲವರೆಗೆ ಬಂದು ನನ್ನನ್ನು ಒಳಗೆ ಕಳುಹಿಸಿ ಬಿಟ್ಟೇ ಹೋದರು !

ಮಾಯಾವರದ ಅಂಗಡಿ ಬೀದಿಯಲ್ಲಿ ಒಬ್ಬ ಮಿತ್ರರ ಮನೆಯಿಂದ ಸತ್ಯಾಗ್ರಹವನ್ನು ಮಾಡಲಿಕ್ಕೆ ಹೊರಟೆನೆಂದು ಹೇಳಿದೆನಲ್ಲವೆ ? ಅವರೂ ನಾನೂ ೮ ವರ್ಷಗಳಿಂದ ಸ್ನೇಹಿತರು. ಅಷ್ಟು ದಿನಗಳಿಂದ ಯಾವಾಗ ನನಗೆ ಕಷ್ಟ ಬಂದರೂ ಅವರನ್ನೇ ಮರೆ ಹೋಗುವುದು ನನ್ನ ವಾಡಿಕೆ. ಅವರೂ ಒಂದು ಸಲವೂ ನನ್ನ ಕೈ ಬಿಟ್ಟವರಲ್ಲ. ೧೯೨೧ ನೇ ವರ್ಷದಲ್ಲಿ ನಾನು ರಾಜಕೀಯ ಚಳವಳಿಯಲ್ಲಿ ಭಾಗವಹಿಸಿ ವ್ಯಾಸಂಗವನ್ನು ಬಿಟ್ಟದ್ದು ಅವರಿಗೆ ಸರಿಬೀಳಲಿಲ್ಲ. ಆಗ ನಾನು ಸಬ್ ಜೈಲಿನಲ್ಲಿರುವಾಗ ಅವರು ಬಂದು ಬೀಗ ಹಾಕಿರುವ ಕಂಬಿ ಬಾಗಿಲೊಳಗೆ ಇರುವ ನನ್ನನ್ನು ನೋಡಿ ಕಣ್ಣೀರು ಸುರಿಸುತ್ತ ನಿಂತಿದ್ದ ದೃಶ್ಯವು ಈಗಲೂ ನನ್ನ ಕಣ್ಣುಮುಂದೆ ಕಟ್ಟಿದೆ.

ಅಂತಹ ಮಿತ್ರರು ಈ ಸಲ ನನ್ನನ್ನು ತಮ್ಮ ಮನೆಯಿಂದಲೆ ಸತ್ಯಾಗ್ರಹಕ್ಕೆ ಕಳುಹಿಸಿಕೊಟ್ಟರು. ಉತ್ಸಾಹದಿಂದ ಔತಣಮಾಡಿಸಿ ಉಪಚರಿಸಿ, ತಾಳ ಮೇಳಗಳೊಡನೆ ಕಳುಹಿಸಿಕೊಟ್ಟರು !

ಸ್ನೇಹಿತರು ಮಾತ್ರವಲ್ಲ ; ನನ್ನ ಮರ್ಯಾದೆಗೂ ಭಕ್ತಿಗೂ ತಕ್ಕವರಾದ ಹಿರಿಯರೂ ಕೂಡ ನನ್ನನ್ನು ಮನಃಪೂರ್ವಕವಾಗಿ ಆಶೀರ್ವಾದಮಾಡಿ ಸೆರೆಮನೆಗೆ ಕಳುಹಿಸಲು ಮುಂದೆ ಬಂದರು. ಕಾಂಗ್ರೆಸ್ ಮುಖಂಡರಿಂದ ಆಶೀರ್ವಾದ ದೊರಕುವುದರಲ್ಲೇನೂ ಅತಿಶಯವಿಲ್ಲವಲ್ಲಾ ! ರಾಜಕೀಯದಲ್ಲಿ ಹೆಚ್ಚು ಆಸಕ್ತಿಯಿಲ್ಲದ ಹಿರಿಯರೇ ತೋರಿಸಿದ ಪ್ರೀತಿಯೂ ಆಶ್ಚರ್ಯವನ್ನುಂಟುಮಾಡುವಂತಿತ್ತು.

ಶ್ರೀ ಕೃಷ್ಣಸ್ವಾಮಿ ಅಯ್ಯರವರು ನನ್ನನ್ನು ಪ್ರೇಮದಿಂದ ಆಲಂಗಿಸಿಕೊಂಡು ಆನಂದ ಬಾಷ್ಪ ಸುರಿಸಿದ್ದನ್ನು ನಾನು ಒಂದು ದಿನವೂ ಮರೆಯಲಾರೆ. "ಯಾವ ವಿಧವಾದ ಸಹಾಯವು ಬೇಕಾದರೂ ಮಗನು ತಂದೆಯ ಬಳಿ ಕೇಳುವಂತೆ ಸಂದೇಹವಿಲ್ಲದೆ ಕೇಳಬೇಕಪ್ಪಾ" ಎಂದು ಅವರು ಗದ್ಗದ ಕಂಠದಲ್ಲಿ ಹೇಳಿದ್ದು ನನ್ನ ಕಿವಿಯಲ್ಲಿ ಯಾವಾಗಲೂ ಪ್ರತಿಧ್ವನಿಸುತ್ತಲೇ ಇರುವುದು. ನಾನು ಕೆಮ್ಮುತ್ತಿರುವುದನ್ನು ಅವರು ನೋಡಿ, " ಮೈಯಲ್ಲಿ ಹುಷಾರಿಲ್ಲವಲ್ಲಾ ಈಗೇತಕ್ಕೆ ಜೈಲಿಗೆ ಹೋಗಬೇಕು " ಎಂದು ಕೇಳಬೇಕಲ್ಲಾ ! ಇಲ್ಲ. '' ಸಾಯಂಕಾಲ ದೇವರ ಪ್ರಸಾದವನ್ನು ಕಳುಹಿಸುತ್ತೇನೆ ; ಮೈ ಹುಷಾರಾಗಿ ಬಿಡುವುದು; ಯಾವ ಕೊರತೆಯೂ ಇಲ್ಲ " ಎಂದು ಹೇಳಿ ಹೋದರು. ಅದರಂತೆಯೇ ನನಗೆ ಯಾವ ವಿಧವಾದ ಕೊರತೆಯೂ ಉಂಟಾಗಲಿಲ್ಲ.

ಶ್ರೀ ವಿ. ವಿ. ಶ್ರೀನಿವಾಸೈಯ್ಯಂಗಾರ್ಯರಿಗೂ ನನ್ನಲ್ಲಿ ಎಷ್ಟೋ ಪ್ರೇಮವುಂಟು. ಆದರೂ ಈ ಸಮಯದಲ್ಲಿ ಅವರನ್ನು ನೋಡಲು ನನಗೆ ವಿಪರೀತ ಭಯ. ಅಂತೂ ದೈವವಶಾತ್ ಸತ್ಯಾಗ್ರಹಕ್ಕೆ ಹೊರಡಲು ೨ ದಿನ ಮುಂಚೆ ನಾನು ಅವರನ್ನು ಸಂಧಿಸುವಂತಾಗಿ ಅವರ ಹತ್ತಿರ ಈ ಸಮಾಚಾರವನ್ನು ಹೇಳಿದೆನೋ ಇಲ್ಲವೋ ''ಅಯ್ಯೋ ಹುಚ್ಚಾ !.........." ಎಂದು ಏನೋ ಹೇಳಹೊರಟರು. ಅಷ್ಟರಲ್ಲೇ ಏನು ತೋರಿತೋ ಏನೋ, ತಿಳಿಯದು. ಹಾಗೆಯೇ ಆ ಮಾತನ್ನು ನಿಲ್ಲಿಸಿ ಬಿಟ್ಟು " ಗೀತೋದಯವೆಂಬ ಪುಸ್ತಕವೊಂದನ್ನು ಬರೆದಿದ್ದೇನೆ. ಗೊತ್ತಿದೆಯೋ ? " ಎಂದರು. '' ಓಹೋ ! ಚೆನ್ನಾಗಿ ಗೊತ್ತು''

ಎಂದೆ. ಆ ಪುಸ್ತಕದ ಒಂದು ಪ್ರತಿಯನ್ನು ತರಿಸಿಕೊಟ್ಟು, 'ಇದನ್ನು ತೆಗೆದು ಕೊಂಡು ಹೋಗು' ಎಂದರು. ನನಗೆ ಆ ಪುಸ್ತಕವನ್ನು ನೋಡಿ ಆನಂದ ಉಕ್ಕಿ ಉಕ್ಕಿ ಬಂದಿತು. ಕೃಷ್ಣಭಗವಾನ್ ಸೆರೆಮನೆಯಲ್ಲಿ ಹುಟ್ಟಿದವನಲ್ಲವೇ ? ಅವನ ಲೀಲೆಗಳನ್ನೊಳಗೊಂಡ ಪುಸ್ತಕವನ್ನು ಸೆರೆಮನೆಗೆ ತೆಗೆದುಕೊಂಡು ಹೋಗುವಂತೆ ಕೊಟ್ಟಿದ್ದು ಎಷ್ಟು ಹೆಮ್ಮೆಯ ವಿಷಯ ? ಶ್ರೀ ವಿ. ವಿ. ಎಸ್‌ರವರ ಪೂರ್ಣ ಆಶೀರ್ವಾದ ಆ ಪುಸ್ತಕದ ಮೂಲಕ ನನಗೆ ದೊರೆಯಿತೆಂದು ಬಹು ಸಂತೋಷ ಗೊಂಡೆ.

## ೩ ದಂಡನೆ

ಮ್ಯಾಜಿಸ್ಟ್ರೇಟರು ಕುಳಿತಿದ್ದಂತೆಯೇ ತೀರ್ಪು ಬರೆಯುತ್ತಿದ್ದರು. ಅವರ ಮುಖದಲ್ಲಿದ್ದ ಸ್ವಾಭಾವಿಕವಾದ ಶೋಕಭಾವವು ಈಗ ಇನ್ನೂ ಹೆಚ್ಚಾಗಿ ಕಾಣು ತ್ತಿತ್ತು. ಅವರು ತಮಗೆ ಮನಸ್ಸಿಲ್ಲದ ಕೆಲಸವನ್ನು ಮಾಡುತ್ತಿರುವ ಹಾಗೆ ತೋರುತ್ತಿತ್ತು.

ಮ್ಯಾಜಿಸ್ಟ್ರೇಟರ ಹೆಸರು ಶ್ರೀ ಅವುಡೈಯಪ್ಪ ಪಿಳ್ಳೆ. ದಿವಂಗತ ಸರ್ ಟಿ. ಶಿವಜ್ಞಾನಂ ಪಿಳ್ಳೆಯವರ ಕುಮಾರರೆಂದೂ, ಅವರು ಮಾಯಾವರಕ್ಕೆ ಬಂದು ೩ ವರ್ಷಗಳಾದವೆಂದೂ ತಿಳಿದು ಬಂತು. ಹಿಂದೆ ಇಲ್ಲಿಗೆ ಬಂದಿದ್ದ ಯಾವ ಡೆಪ್ಯುಟಿ ಕಲೆಕ್ಟರುಗಳಿಗೂ ದೊರೆಯದಂತ ' ಡಿನ್ನರ್ ಪಾರ್ಟಿಗಳು ' ಇವರಿಗೆ ದೊರೆತವಂತೆ. ಇಲ್ಲಿನ ಜನರ ಮೆಚ್ಚುಗೆಯನ್ನು ಅಷ್ಟರಮಟ್ಟಿಗೆ ಸಂಪಾದಿಸಿ ಕೊಂಡು ಒಟ್ಟಿದ್ದರು. ಇಂತಹ ಒಳ್ಳೆಯ ಮನುಷ್ಯರಿಗೆ ಕಷ್ಟವನ್ನು ಕೊಡುತ್ತೇ ವಲ್ಲಾ ಎಂದು ನನ್ನ ಮನಸ್ಸು ತಲ್ಲಣಿಸಿತು.

ತಾಲ್ಲೂಕು ಕಛೇರಿಯ ಪಕ್ಕದಲ್ಲಿದ್ದ ಸಬ್ ಜೈಲಿನ ಒಂದು ಚಿಕ್ಕ ಕೋಣೆ ಯಲ್ಲಿ ವಿಚಾರಣೆ. ಮ್ಯಾಜಿಸ್ಟ್ರೇಟರಿಗೆ ಉನ್ನತಾಸನವಿಲ್ಲ. ಕೈದಿಗಳಿಗೂ. ಸಾಕ್ಷಿಗಳಿಗೂ ಪ್ರತ್ಯೇಕ ಸ್ಥಳವಿಲ್ಲ. ಸಾಧಾರಣವಾದ ಒಂದು ಕುರ್ಚಿಯನ್ನು ಮ್ಯಾಜಿಸ್ಟ್ರೇಟರು ಅಲಂಕರಿಸಿದ್ದರು. ಅವರ ಎದುರಿಗಿದ್ದ ಒಂದು ಸ್ಟೂಲಿನ ಮೇಲೆ ನಾನು ಕುಳಿತಿದ್ದೆ. ನನ್ನ ಸ್ನೇಹಿತರು ೫-೬ ಜನ ಒಂದು ಚಿಕ್ಕ ಬೆಂಚಿ ನಲ್ಲಿ ಇಕ್ಕಟ್ಟಾಗಿ ಕುಳಿತುಕೊಂಡಿದ್ದರು. ಕಛೇರಿಯ ಹೊರಗಡೆ ಅನೇಕರು ವಿಚಾರಣೆಯ ತೀರ್ಪನ್ನು ತಿಳಿದುಕೊಳ್ಳುವುದಕ್ಕಾಗಿ ಕಾದುಕೊಂಡಿದ್ದರು.

ಮ್ಯಾಜಿಸ್ಟ್ರೇಟರು ತೀರ್ಪು ಬರೆಯುತ್ತಿದ್ದಾಗ, ಕೋರ್ಟಿನಲ್ಲಿ ನಿಶ್ಶಬ್ದವಾಗಿತ್ತು, ಸುಮಾರು ೧೯ ವರ್ಷಕ್ಕೆ ಮುಂಚೆ ೧೯೨೨ ನೇ ಇಸವಿ ಮಾರ್ಚಿ ತಿಂಗಳಲ್ಲಿ, ಇದೇ ತರಹ ದೇಶಸೇವೆ ಮಾಡಿದ್ದಕ್ಕೆ ನನ್ನ ಮೇಲೆ ನಡೆದ ವಿಚಾರಣೆ ಜ್ಞಾಪಕಕ್ಕೆ ಬಂತು. ೧೧೦ಅ ನೇ ವಿಧಿ ಪ್ರಕಾರ ಜಾಮಿನಾಸಿಸ ಮೇಲೆ ಬಿಡುಗಡೆಯುಂಟು. ಅದೂ, ಒಂದು ವರ್ಷ ರಾಜ್ಯಾಂಗ ದ್ವೇಷ ಪ್ರಚಾರವನ್ನು ಮಾಡುವುದಿಲ್ಲವೆಂದು ಹೇಳಿದರೆ ಜಾಮೀನು ಮೇಲೆ ಬಿಡುವುದಾಗಿ ಹೇಳಿದರು ನನ್ನ ವಿಚಾರಣೆ ನಡೆಸಿದ ಮ್ಯಾಜಿಸ್ಟ್ರೇಟರು ಫರಂಗಿ ಐ. ಸಿ. ಎಸ್. ದೊರೆ ; ಅವರು ಉಚ್ಚಸ್ಥಾನದಲ್ಲಿ ಮಂಡಿಸಿದ್ದರು ; ನಾನು ಕೈದಿಯ ಸ್ಥಳದಲ್ಲಿ ನಿಂತಿದ್ದೆ, ಕೋರ್ಟಿನಲ್ಲಿ ನನಗೆ ತಿಳಿದವರಾಗಲಿ, ಬಂಧುಗಳಾಗಲಿ, ಸ್ನೇಹಿತರಾಗಲಿ, ಯಾರೂ ಇರಲಿಲ್ಲ. ಅದಕ್ಕೆ ಮೊದಲು ನಾನು ಕೋರ್ಟನ್ನು ನೋಡಿದ್ದೇ ಇಲ್ಲ, ಪೋಲೀಸರನ್ನು ಕಂಡರೇ ಭಯಪಡುತ್ತಿದ್ದ ಕಾಲವಾಗಿತ್ತು, ಮನಸ್ಸು ಢಭ ಢಭ ಎಂದು ಹೊಡೆದುಕೊಳ್ಳುತ್ತಿತ್ತು ; ಆದರೂ, ಭಾರತ ಭೂಮಿಯನ್ನು ಕಾಪಾಡುವ ಭಾರವನ್ನು ತಲೆಯಮೇಲೆ ಹೊತ್ತುಕೊಂಡಿದ್ದೇನೆಂಬ ಭಾವನೆಯೂ ಇದ್ದಿತು.

ಐ. ಸಿ. ಎಸ್. ದೊರೆಗಳು ಚಿಕ್ಕ ವಯಸ್ಸಿನವರು; ಅವರಿಗಿಂತ ನಾನು ಚಿಕ್ಕವನು. ಅವರು ಪ್ರಾಸಿಕ್ಯೂಟಿಂಗ್ ಇನ್ಸ್ಪೆಕ್ಟರನ್ನು ನೋಡಿ, "ಅಪರಾಧಿಗೆ 'ಸೆಡಿಷನ್' ಎಂದರೆ ಏನೆಂಬುದು ತಿಳಿದಿದ್ದೆಯೋ ಇಲ್ಲವೋ." ಎಂದರು. ಅವರು ಕೇಳುವುದಕ್ಕೆ ಮುಂಚೆಯೇ ನಾನು, 'ಓಹೋ ಚೆನ್ನಾಗಿ ಗೊತ್ತು. ಕಳೆದ ಒಂದು ವರ್ಷಕಾಲದಿಂದಲೂ ಅದೇ ಕೆಲಸವನ್ನು ತಾನೇ ಮಾಡಿಕೊಂಡಿದ್ದೇನೆ" ಎಂದುತ್ತರವಿತ್ತೆ. ನಿಜವನ್ನು ಹೇಳಿದ್ದರ ಫಲ: ಒಂದುವರ್ಷ ಸಜಾ.

ಈ ಹಳೆಯ ಕಥೆಯನ್ನು ನೆನೆದುಕೊಂಡಿರುವಾಗ, 'ತೀರ್ಪು ಹೇಳುತ್ತಾರೆ; ಎದ್ದುನಿಲ್ಲಿ' ಎಂದು ಪಕ್ಕದಲ್ಲಿದ್ದವರೊಬ್ಬರು ಹೇಳಿದರು. ಒಡನೆ ಎದ್ದು ನಿಂತೆ. ಮ್ಯಾಜಿಸ್ಟ್ರೇಟರು ತೀರ್ಪನ್ನು ಓದತೊಡಗಿದರು. ಶಾಸನ ನಿಬಂಧನೆಗಳು ಕೆಲವನ್ನು ಹೇಳಿಬಿಟ್ಟು ಕೊನೆಗೆ ನನ್ನನ್ನು ನೋಡಿ, "ಆದ್ದರಿಂದ ಭಾರತ ರಕ್ಷಣಾ ಶಾಸನ ಪ್ರಕಾರ ನಿಮ್ಮನ್ನು ಶಿಕ್ಷಿಸುವೆನು: ಮೂರು ತಿಂಗಳು ಸಜಾ; ತಪ್ಪಿದರೆ ೨೫೦ ರೂ." ಎಂದರು.

" ನಿಮ್ಮನ್ನು ಶಿಕ್ಷಿಸುವೆನು . " ಎಂದ ಒಡನೆ ನನ್ನ ಎದೆಯು ಢಬಢಬನೆ ಹೊಡೆದುಕೊಳ್ಳಲಾರಂಭಿಸಿತು. ಅವರ ಬಾಯಿಂದ ಏನು ಬರುತ್ತದೆಯೋ

ಎಂಬ ಹೆದರಿಕೆಯೇ ಈ ಎದೆ ಬಡಿತಕ್ಕೆ ಕಾರಣ. ಸತ್ಯಾಗ್ರಹಿಗಳನ್ನು ಶಿಕ್ಷಿಸುವ ವಿಷಯದಲ್ಲಿ ಯಾವವ್ಯವಸ್ಥೆಯೂ ಇಲ್ಲವೆಂಬುದನ್ನು ತಿಳಿದುಕೊಂಡಿರುವೆವಲ್ಲವೆ? ಒಬ್ಬ ಮ್ಯಾಜಿಸ್ಟ್ರೇಟ್, ಒಂದೇವಿಧವಾದ ಸತ್ಯಾಗ್ರಹ ಘೋಷವನ್ನು ಮಾಡಿದ್ದಕ್ಕಾಗಿ, ೪ ದಿವಸಗಳು ನಾಲ್ವರನ್ನು ವಿಚಾರಣೆ ಮಾಡಿದರು. ಮೊದಲನೆಯ ದಿನ ಒಂದುವರ್ಷ ಸಜಾ ವಿಧಿಸಿದರು; ಮಾರನೇದಿನ ೯ತಿಂಗಳು ಸಾಕೆಂದರು; ಮೂರನೆಯದಿನ ೧೫ ತಿಂಗಳು ವಿಧಿಸಿಬಿಟ್ಟರು; ನಾಲ್ಕನೆಯ ದಿನ ದಕ್ಷಿಣೆಂಸು ಕೆಳಕ್ಕಿಳಿದು, "೪೫ ದಿನಗಳ ಸಾದಾ ಸಜ" ಎಂದರು.

ಈ ತರಹ ವಿಚಿತ್ರಗಳಿಗೆ ಕಾರಣವೇನೋ ನಮಗೆ ತಿಳಿಯದು. ಅಪರಾಧಗಳನ್ನು ಯಾವ ತ್ರಾಸಿನಲ್ಲಿಟ್ಟು ಹೇಗೆ ತೂಗುವರೋ ಅಪರಾಧವೆಂದರೆ ಘೋಷಮಾಡಿದವರ ದೇಹವನ್ನನುಸರಿಸುವುದೋ ಅಥವಾ ಅವರ ಕಂಠವನ್ನನುಸರಿಸುವುದೋ ಅಥವಾ ಅವರು ಭಾಷಣಮಾಡುವಾಗ ಸೇರಿದ್ದ ಗುಂಪನ್ನನುಸರಿಸುವುದೋ, ಇದೂ ಅಲ್ಲದಿದ್ದರೆ ಮ್ಯಾಜಿಸ್ಟ್ರೇಟರ ಮನಸ್ಸು ಹೇಗೆ ಇದೆಯೋ ಹಾಗೋ, ಇದಾವುದೂ ನನಗೆ ತಿಳಿಯದು. ಬೇಕಾದ ಏರ್ಪಾಡುಗಳನ್ನೆಲ್ಲಾ ಮಾಡಿಟ್ಟು, ಒಂದು ವರ್ಷದ ಜೈಲು ವಾಸಕ್ಕೆ ತಯಾರಾಗಿ ಬಂದಿದ್ದೆ. ಆದ್ದರಿಂದ "೬ ತಿಂಗಳು" ಎಂದದ್ದು ನನಗೆ ಏನೋ ಒಂದು ವಿಧವಾದ ಹರ್ಷವುಂಟಾಯಿತು. ಮಕ್ಕಳು ಸಹ ನನ್ನನ್ನು ನೋಡಿ ನಗು ಮುಖವನ್ನು ತಾಳಿದರು. ಅವರ ನಗುಮುಖಗಳಲ್ಲಿ ಕೂಡ ಒಂದು ವಿಧವಾದ ಪರಿಹಾಸವು ಕೂಡಿರುವಂತೆ ನನ್ನ ಮನಸ್ಸಿಗೆ ತೋರಿತು.

ಕಛೇರಿಯ ಹೊರಗಡೆ ನೆರೆದಿದ್ದ ಜನಗಳ ಮನಸ್ಸಿನಲ್ಲಿ ಯಾವ ವಿಧವಾದ ಭಾವನೆಯಿತ್ತೋ ತಿಳಿಯದು. ಇಷ್ಟೊಂದು ಆರ್ಭಟವಾಗಿ ವಿಚಾರಣೆ ನಡೆಸಿ, ಕೊನೆಗೆ '೬ ತಿಂಗಳ ದಂಡನೆ' ಎಂದು ತಿಳಿದ ಕೂಡಲೇ ಅವರುಗಳಿಗೆ ಆಶ್ಚರ್ಯವೇ ಆಗಿರಬೇಕು. ಆದರೆ ಅಷ್ಟೊಂದು ಬಿಸಿಲಿನಲ್ಲಿ, ತೀರ್ಪಿತ್ತ ನಂತರವೂ ಬಹಳ ಹೊತ್ತು ಜನಗಳು ಸಬ್ ಜೈಲಿನ ಹೊರಗಡೆ ನಿಂತುಕೊಂಡೇ ಇದ್ದರು. "ನಾವು ಜೈಲಿನಲ್ಲಿರುವವರೆಗೂ ಹೀಗೆಯೇ" ಎಂದುಕೊಂಡೆ; ಸಬ್ ಜೈಲಿನ ಕೊಠಡಿಗಳಲ್ಲೊಂದರಲ್ಲಿ ನನ್ನನ್ನು ಬಿಡುವುದಾಗಿ ಅಲ್ಲಿದ್ದ ಪೋಲೀಸ್ ಅಧಿಕಾರಿಯಿಂದ ತಿಳಿಯಿತು. ಹಾಗೆಯೇ ಒಂದು ಕೊಠಡಿಯ ಬಾಗಿಲು ತೆಗೆದು ನನ್ನನ್ನು

ಒಳಕ್ಕೆ ಹೋಗುವಂತೆ ಹೇಳಿದರು. ನಾನು ನನ್ನ ಹಾಸಿಗೆಯನ್ನೂ, ನನ್ನ ಜೊತೆಯಲ್ಲಿ ತಂದಿದ್ದ ಪುಸ್ತಕಗಳನ್ನೂ ತೆಗೆದುಕೊಂಡು ಒಳಕ್ಕೆ ಹೋಗಿ ಹಾಸಿಗೆಯನ್ನು ಹಾಸಿಕೊಂಡು ಕುಳಿತುಕೊಂಡೆ. ಸಬ್ ಜೈಲುಗಳಿಗೇ ವಿಶೇಷವಾದ ಒಂದು ತರಹ ವಾಸನೆಯು ಘಮಘಮವೆಂದು ಮೂಗನ್ನು ಒಡೆಯಲಾರಂಭಿಸಿತು.

## ೪. ಸಬ್ ಜೈಲಿನಲ್ಲಿ

ಬಾಗಿಲು ಬೀಗ ಹಾಕಲ್ಪಟ್ಟಮೇಲೆ ಏನನ್ನಾದರೂ ಓದೋಣವೆಂದು, ಕೈಯಲ್ಲಿ ತಂದಿದ್ದ ಪುಸ್ತಕಗಳನ್ನು ತೆಗೆದೆ ೪ ಪುಸ್ತಕಗಳಿದ್ದವು. ಎಲ್ಲವೂ ಸ್ನೇಹಿತರಿಂದ ಸೆರೆಮನೆಯಲ್ಲಿ ಓದುವುದಕ್ಕೆಂದು ಕೊಡಲ್ಪಟ್ಟ ಪುಸ್ತಕಗಳು.

೧. ಕಂಬರಾಮಾಯಣ- ಅಯೋಧ್ಯಾಕಾಂಡ.

೨. ಡಾಕ್ಟರ್ ರವೀಂದ್ರನಾಥ ಠಾಕೂರರ ಕವಿತೆಗಳೂ- ನಾಟಕಗಳೂ

೩. ವಾಲ್ಮೀಕಿ ರಾಮಾಯಣದ ಗ್ರಂಥ ವಿಮರ್ಶೆ.

೪. ಶ್ರೀ ವಿ. ವಿ ಶ್ರೀನಿವಾಸಯ್ಯಂಗಾರ್ರ, "ಗೀತೋದಯ."

ಈ ನಾಲ್ಕು ಪುಸ್ತಕಗಳನ್ನೂ ಮುಂದಿಟ್ಟುಕೊಂಡು, ಯಾವುದನ್ನು ತೆರೆಯಲಿ ಎಂದು ಯೋಚಿಸಿದೆ; ಆದರೆ ಒಂದನ್ನಾದರೂ ತೆರೆಯಲು ಮನಸ್ಸು ಬರಲಿಲ್ಲ.

ಬಲಾತ್ಕಾರವಾಗಿ ಮೂಗನ್ನು ಒಡೆದುಕೊಂಡು ಬರುತ್ತಿದ್ದ ಸಬ್ ಜೈಲಿನ ವಾಸನೆಯು ಹಿಂದಿನ ಸಬ್ ಜೈಲಿನ ವಾಸನೆಯನ್ನು ನೆನಪಿಗೆ ತಂದು ಪುಸ್ತಕಗಳಲ್ಲಿ ಮನಸ್ಸು ನಿಲ್ಲದಹಾಗೆ ಮಾಡಿಬಿಟ್ಟಿತು.

ಮಾಯಾವರ ಎಲ್ಲಿದೆ? ಕರೂರ್ ಎಲ್ಲಿದೆ? ಮುಸರಿ ಇರುವುದೆಲ್ಲಿ? ೧೯೨೨ ಎಲ್ಲಿ? ೧೯೪೧ ಎಲ್ಲಿ? ಆದರೂ ಮೇಲೆ ಹೇಳಿದ ಅಷ್ಟು ಸ್ಥಳಗಳಲ್ಲಿಯೂ ಸಬ್ ಜೈಲಿನ ವಾಸನೆಯು ಒಂದೇ ವಿಧವಾಗಿರುವುದು ಎಷ್ಟು ಆಶ್ಚರ್ಯಕರ? ಮುಸರಿ, ಕರೂರ್ ಸಬ್ ಜೈಲುಗಳಲ್ಲಿ ೧೯೨೨ರಲ್ಲಿ ಒಟ್ಟು ೪೧ ದಿನಗಳು ಇದ್ದೆ. ನನ್ನನ್ನು ಕೈದುಮಾಡಿದ್ದು ಕರೂರಿನಲ್ಲಿ. ಆಗತಾನೇ ಹೊಸದಾಗಿ ಬಂದಿದ್ದ

ಐ. ಸಿ. ಎಸ್, ಸಬ್ ಕಲೆಕ್ಟರಿಂಗೆ ಮೊದಲನೇವರ್ಗದ ಮ್ಯಾಜಿಸ್ಟ್ರೇಟ್ ಪದವಿಯು ಇನ್ನೂ ಆಗಿರಲಿಲ್ಲ. ಈ ಕಾರಣದಿಂದ ನನ್ನನ್ನು ಮುಸರಿಗೆ ಕರೆದುಕೊಂಡು ಹೋದರು. ಆದರೆ ಮುಸರಿಯಲ್ಲಿ ವಿಚಾರಣೆಯೇ ನಡೆಸದೆ ದಿನಗಳನ್ನು ತಳ್ಳಿಹಾಕಿಕೊಂಡು ಬಂದರು ಅಲ್ಲಿನ ಪೋಲೀಸಿನವರು. ಮುಸರಿ ಡೆಪ್ಯುಟಿ ಕಲೆಕ್ಟರ ಮುಂದೆ ನನ್ನನ್ನು ಪೋಲೀಸಿನವರು ಮೊದಲುಸಲ ಕರೆದುಕೊಂಡು ಹೋದಾಗ, "ಈ ಚಿಕ್ಕಹುಡುಗನು ತಾನೇ ಬ್ರಿಟಿಷ್ ರಾಜ್ಯವನ್ನು ತಲೆಕೆಳಗು ಮಾಡಿಬಿಡುವನೆಂಗು ಹಿಡಿದುಕೊಂಡು ಬಂದಿರುವಿರಿ?" ಎಂದು ಅವರು ಪೋಲೀಸರನ್ನು ಕೇಳಿದರು. ಇದರಿಂದ ಪೋಲೀಸಿನವರು ಭಯಗೊಂಡರೋ ಏನೋ ವಿಚಾರಣೆಯನ್ನು ತಳ್ಳಿಹಾಕಿಕೊಂಡೇ ಇದ್ದರು. ಈ ತರಹ ೩೪ ದಿನಗಳು ಮುಸರಿ ಸಬ್ ಜೈಲಿನಲ್ಲಿ ಇಟ್ಟು, ನಂತರ ಕರೂರಿಗೇ ಪುನಃ ಕರೆದುಕೊಂಡು ಹೋಗಿ ಅಲ್ಲಿ ೭ ದಿನಗಳು ಇಟ್ಟಿದ್ದು, ಈ ವೇಳೆಗೆ ಮೊದಲನೇ ವರ್ಗದ ಮ್ಯಾಜಿಸ್ಟ್ರೇಟ್ ಪದವಿಯನ್ನು ಹೊಂದಿದ್ದ ಸಬ್ ಕಲೆಕ್ಟರ ಮುಂದೆ ವಿಚಾರಣೆಗೆ ಕರೆದು ತಂದರು!

ಒಂದೊಂದು ತಾಲ್ಲೂಕಿನ ಮುಖ್ಯ ಪಟ್ಟಣಗಳಲ್ಲಿಯೂ, ತಾಲ್ಲೂಕು ಕಛೇರಿಯ ಜೊತೆಗೆ ಒಂದೊಂದು ಸಬ್ ಜೈಲು ಇರುವುದು. ಅದರ ಮೇಲ್ವಿಚಾರಣೆಯ ಭಾರವು ಸಬ್-ಮ್ಯಾಜಿಸ್ಟ್ರೇಟರಿಗೆ ಸೇರಿದ್ದು. ಖೈದಿಗಳನ್ನು ವಿಚಾರಣೆ ಮುಗಿಯುವವರೆಗೆ ಈ ಸಬ್ ಜೈಲುಗಳಲ್ಲಿಟ್ಟಿರುವರು. ವಿಚಾರಣೆ ಮುಗಿದು ದಂಡಿಸಿದನಂತರ, ಡಿಸ್ಟ್ರಿಕ್ಟ್ ಜೈಲುಗಳಿಗೋ, ಸೆಂಟ್ರಲ್ ಜೈಲುಗಳಿಗೋ ಕಳುಹಿಸುವರು.

ಸಬ್ ಜೈಲುಗಳಲ್ಲಿ ಪ್ರತ್ಯೇಕ, ಪ್ರತ್ಯೇಕವಾದ ಕೊಠಡಿಗಳಿವೆ ರಿಮ್ಯಾಂಡ್ ಕೈದಿಗಳನ್ನು, ಒಂದೊಂದು ಕೊಠಡಿಯಲ್ಲಿ ಒಬ್ಬೊಬ್ಬರನ್ನೋ, ಇಬ್ಬರು ಮೂವರನ್ನೋ ಸೇರಿಸುವರು.

ಮುಸರಿ ಸಬ್ ಜೈಲಿನಲ್ಲಿ ನನಗೆ ಪ್ರತ್ಯೇಕವಾದ ಕೊಠಡಿಯಲ್ಲಿ ಇರುವ ಗೌರವ ಸಿಕ್ಕಿತ್ತು. ಜೈಲು ಒಳಗಿನ ಮಾರ್ಗವಾಗಿ ನನ್ನ ಕೊಠಡಿಗೆ ಹೋಗುವಾಗ ಅಲ್ಲಿದ್ದ ಕೊಠಡಿಗಳನ್ನು ಇಣಿಕಿನೋಡಿದೆ. ಒಂದೊಂದು ಕೊಠಡಿಯಲ್ಲಿಯೂ ೨-೩ ಜನಗಳನ್ನು ಕೂಡಿದ್ದರು. ಈ ತರಹ ಜನರೊಡನೆ ನನ್ನನ್ನೂ

ಕೂಡಿಬಿಡುವರೋ ಏನೋ ಎಂದು ಭಯಪಟ್ಟೆ. ಆದರೆ ಅದೃಷ್ಟವಶಾತ್ ನನ್ನೊಬ್ಬನನ್ನೇ ಒಂದು ಕೋಣೆಯಲ್ಲಿ ಕೂಡಿದರು. ಕೂಡಿ ಬೀಗಹಾಕಿ ಕೊಂಡು ಹೋದರು. ಕೊಠಡಿಯ ಮೂಲೆಯಲ್ಲಿ ಒಂದು ಮಡಕೆ ಇಟ್ಟಿತ್ತು. ಇನ್ನೇನೂ ಸಾಮಾನುಗಳಿರಲಿಲ್ಲ. ಟಾರಿನ ವಾಸನೆ, ಲೋರ್ಷ ವಾಸನೆ, ಹಳೆಯ ಕಂಬಳಿ ವಾಸನೆ, ತಿಗಣೆ ವಾಸನೆ, ಸೀಮೆಯೆಣ್ಣೆ ವಾಸನೆ ಇವೆಲ್ಲದರ ವಾಸನೆಯೂ ಕೂಡಿಕೊಂಡು ಒಂದು ವಿಧವಾದ ಕೊಳಕು ವಾಸನೆಯು ನಾಲ್ಕು ಕಡೆಗಳಿಂದಲೂ ಬರುತ್ತಿತ್ತು. ಪಕ್ಕದ ಕೊಠಡಿಯಲ್ಲಿದ್ದ ಕೈದಿಗಳು ತಮ್ಮ ಅಪೂರ್ವ ಭಾಷೆಯಲ್ಲಿ ಏನೇನೋ ಮಾತನಾಡಿಕೊಳ್ಳುತ್ತಿರುವುದು ಕೇಳಿಸುತ್ತಿತ್ತು. ದೂರದಲ್ಲಿ ಒಂದು ಲಾಂದ್ರ—ಮಸಿಯಿಂದ ಮುಚ್ಚಿಕೊಂಡಿದ್ದ ಲಾಂದ್ರ—ಮಿಣಮಿಣನೆ ಉರಿಯು ತ್ತಿತ್ತು. ಆಡಿಗಡಿಗೆ ಪಹರೆಯವರು ವರಾಂಡದಲ್ಲಿ ಬಂದು ತಿರುಗಾಡಿಕೊಂಡು ಹೋಗುತ್ತಿದ್ದರು. ಘಂಟೆಗಳು ಒಂದಾದಮೇಲೊಂದು ಹೊಡೆಯುವ ಶಬ್ದ ಕೇಳಿ ಸಿತು. ಪಹರೆ ಬದಲಾಯಿಸಲು ಹೊಸದಾಗಿ ಬಂದವರನ್ನು ಹಳೆಯವನು "ಹೂ ಈಸ್ ದೇರ್" ಎಂದು ಘರ್ಜಿಸುವುದು ಭಯಂಕರವಾಗಿ ಕೇಳಿಸುತ್ತಿತ್ತು. ನಿದ್ದೆ ಬರಲಿಲ್ಲವೆಂದು ಹೇಳಬೇಕಾದ್ದೇ ಇಲ್ಲ. ಸ್ವಲ್ಪ ಕಣ್ಣು ಮುಚ್ಚುವ ಪ್ರಯತ್ನ ಮಾಡಿದಗೆ, ಒಡನೆ ಮೇಲ್ಕಂಡ ಕೂಗುಗಳಿಂದ ಧಡಕ್ಕನೆ ಎಚ್ಚರವಾಗಿ ದಿಗಿಲಿ ನಿಂದ ಎದ್ದು ಬಿಡುವೆ. ಕೆಲವುವೇಳೆ ಈ ಕೂಗುಗಳ ಜೊತೆಗೆ, ಎಲ್ಲಿಯೋ ದೂರ ದಲ್ಲಿ ನರಿಗಳು ಕೂಗುವ ಶಬ್ದವೂ ಸೇರಿಕೊಳ್ಳುವುದು. ಮೈಯೆಲ್ಲಾ ಒಂದು ನಿಮಿಷ ನಡುಗಿ ಸ್ವಲ್ಪ ಹೊತ್ತಾದ ಮೇಲೆ ಸಮಾಧಾನಕ್ಕೆ ಬರುವುದು. ಮುಸರಿ ಸಬ್ ಜೈಲಿನಲ್ಲಿ "ನಾನು ವಿಚಾರಣೆ ಕೈದಿಯಾಗಿರುವೆನಲ್ಲವೇ? ನಾಳೆ ಮನಸ್ಸು ಮಾಡಿದರೂ ಒಂದು ಪತ್ರವನ್ನು ಬರೆದುಕೊಟ್ಟು, ಬಿಡುಗಡೆ ಹೊಂದಬಹುದಲ್ಲವೆ? ನಾನಾಗಿಯೇ ಬಂದಿರುವೆನಲ್ಲಾ! ಮತ್ತೇಕೀಭಯ?" ಎಂದು ಹಲ್ಲು ಕಚ್ಚಿ ಕೊಂಡು ಮನಸ್ಸು ದೃಢಪಡಿಸಿಕೊಳ್ಳುತ್ತಿದ್ದೆ.

ಸಬ್ ಜೈಲಿನಲ್ಲಿ ಸಾಧಾರಣವಾಗಿ ೨೪ ಘಂಟೆಗಳೂ ಕೊಠಡಿಯಲ್ಲಿ ಬೀಗ ಹಾಕಿಯೇ ಇಟ್ಟಿರುವರು. ಬೆಳಿಗ್ಗೆ ೧೫ ನಿಮಿಷವೂ, ಸಂಜೆ ೧೫ ನಿಮಿಷವೂ ಹೊರಕ್ಕೆ ಹೋಗಲು ಬಿಡುವರು: ಅಷ್ಟೆ.

"ಒಂದು ನಿಮಿಷ ಒಂದು ತಿಂಗಳ ಹಾಗೆ ಕಳೆಯಿತು" ಎಂದು

ಪುಸ್ತಕಗಳಲ್ಲಿ ಓದಿದರೆ ಸಾಧಾರಣವಾಗಿ ಯಾರಿಗೂ ನಂಬಿಕೆಯುಂಟಾಗುವುದಿಲ್ಲ. ಕತೆಗಾರನ ಅತಿಶಯೋಕ್ತಿ ಎಂದೇ ತಿಳಿದುಕೊಳ್ಳುವರು. ಆದರೆ ಸಬ್ ಜೈಲಿನಲ್ಲಿ ಇದ್ದು ಅನುಭವಿಸಿದವರಿಗೆ ಇದರಲ್ಲಿ ಅಪನಂಬಿಕೆಯುಂಟಾಗಲಾರದು. ಕುಳಿತು ಕುಳಿತು ಸಾಕಾಗುವುದು ; ಮಲಗಿ ಮಲಗಿ ಸಾಕಾಗುವುದು ; ಕೊಠಡಿಯಲ್ಲೇ ತಿರುಗಿ ತಿರುಗಿ ಬೇಜಾರು ಹಿಡಿದು ಹೋಗುವುದು.

ಆ ೧೦ ಅಡಿ ಕೊಠಡಿಯಲ್ಲಿ ತಿರುಗಾಡಿಕೊಂಡೇ ಇರುವೆನು ; ಕೊನೆಗೆ ತಲೆ ಸುತ್ತುವುದಕ್ಕಾರಂಭಿಸಿದಾಗ ಕುಳಿತುಕೊಳ್ಳುತ್ತಿದ್ದೆ! ಕುಳಿತುಕೊಂಡು ೧೫ ನಿಮಿಷಕ್ಕೆಲ್ಲಾ ಎದ್ದು ತಿರುಗಾಡಲಾರಂಭಿಸುತ್ತಿದ್ದೆ.

ಆ ಕಾಲದಲ್ಲಿ, ಮುಸರಿ ಸಬ್ ಮ್ಯಾಜಿಸ್ಟ್ರೇಟರಾಗಿದ್ದವರು ಬಹಳ ಒಳ್ಳೆಯ ಜನರು. ಅವರ ಹೆಸರು ಮರೆತುಹೋಯಿತು. ಆದರೆ ಅವರ ಮುಖವೂ ಸರಳವಾದ ಮಾತುಗಳೂ ಮರೆಯಲಾಗುವುದಿಲ್ಲ.

ಅವರು ಅಡಿಗಡಿಗೆ ನನ್ನನ್ನು ಬಂದು ನೋಡಿಕೊಂಡು ಹೋಗುತ್ತಿದ್ದರು. ಒಂದು ದಿನ, "ಯಾವುದಾದರೂ ಪುಸ್ತಕವಿದ್ದರೆ ಕೊಡುವಿರಾ ?" ಎಂದೆ. "ಆಹಾ !" ಎಂದು ಹೋಗಿ ಪ್ರೀತಿಯಿಂದ ಒಂದು ಪುಸ್ತಕವನ್ನು ಕಳುಹಿಸಿಕೊಟ್ಟರು. ಅದು ಒಂದು ಇಂಗ್ಲೀಷ್ ಕಥೆ ಪುಸ್ತಕ. ಈ ಪುಸ್ತಕವನ್ನು ನಾನು ಒಟ್ಟು ೯ ಸಲ ಓದಿದೆ ! ಪುಸ್ತಕವು ಅಷ್ಟು ಚೆನ್ನಾಗಿತ್ತೆಂದಲ್ಲ ; ಹೊತ್ತು ಹೋಗುವುದಕ್ಕಾಗಿ ಪುನಃ ಪುನಃ ಓದಿದೆ.

ಆದರೆ ಈಸಲ ಕೈಯ್ಯಲ್ಲಿ ಳ ಪ್ರಿಯವಾದ ಪುಸ್ತಕಗಳು—ನಾಲ್ಕು ಸಲ ಓದಿ ತಿಳಿದುಕೊಳ್ಳತಕ್ಕಂಥ ಪುಸ್ತಕಗಳು—ಇದ್ದೂ ಅವನ್ನು ತೆಗೆದು ನೋಡುವುದಕ್ಕೆ ಕೂಹ ಮನಸ್ಸು ಬರಲಿಲ್ಲ. ಬೆಳಿಗ್ಗಿನಿಂದ ನಡೆದ ಸಂಭವಗಳಿಂದಲೂ, "ಈ ರಾತ್ರಿ ಮಾತ್ರ ಇಲ್ಲಿರಬೇಕಾದ್ದು; ನಾಳೆ ಬೆಳಿಗ್ಗೆ ತಿರುಚನಾಪಳ್ಳಿ ಜೈಲಿಗೆ ಕರೆದು ಕೊಂಡು ಹೋಗಿಬಿಡುವರು ; ಅಲ್ಲಿ ರಾಜಾಜಿಯನ್ನು ನೋಡಬಹುದು" ಎಂದು ಮನಸ್ಸಿನಲ್ಲಿ ನೆನೆದುಕೊಂಡು ಒಂದು ವಿಧವಾದ ಸಂತೋಷದಿಂದಲೂ ಮನಸ್ಸು ಕದಡಿಹೋಗಿತ್ತು. ಈ ಆನಂದ ಸಾಗರದಲ್ಲಿ ತೇಲುತ್ತಾ ರಾತ್ರಿ ೧೦ ಘಂಟೆಗೆ ಮಲಗಿಕೊಂಡ ಒಡನೆ ನಿದೆ, ಬಂದುಬಿಟ್ಟಿತು.

# ೫. ಸ್ವರ್ಗದ ಬಾಗಿಲು

ಬೆಳಿಗ್ಗೆ ೪ ಘಂಟೆ ಸುಮಾರಿಗೆ, "ಸಾರ್, ಸಾರ್" ಎಂಬ ಕೂಗನ್ನು ಕೇಳಿ ಧಡಕ್ಕೆಂದು ಎದ್ದು ಕುಳಿತೆ. ನಾನು ಈಗ ಕೈದಿ ಎಂಬುದೂ ಮೂರು ತಿಂಗಳ ಶಿಕ್ಷೆಯಲ್ಲಿ ಒಂದು ದಿನವನ್ನು ಕಳೆದದ್ದಾಯಿತೆಂಬುದೂ ಜ್ಞಾಪಕಕ್ಕೆ ಬಂತು. ಇನ್ನು ಮಧ್ಯಾಹ್ನದೊಳಗೆ ತಿರುಚನಾಪಳ್ಳಿಗೆ ಹೋಗಿ ಸ್ನೇಹಿತರನ್ನು ನೋಡುವೆನೆಂಬ ಸಂತೋಷವು ಮನಸ್ಸನ್ನಾವರಿಸಿತು.

ಕೊಠಡಿಯ ಬೀಗ ತೆಗೆದರು. ಅವಸರ ಅವಸರವಾಗಿ ಎದ್ದು ಹಾಸಿಗೆಯನ್ನು ಕಟ್ಟಿದೆ. ಇಬ್ಬರು ಪೋಲೀಸಿನವರು ಒಂದು ಲಾಂದ್ರ ಹಿಡಿದುಕೊಂಡು ನನ್ನನ್ನು ಬಾವಿಯ ಹತ್ತಿರ ಕರೆದುಕೊಂಡು ಹೋದರು. ದೀಪಾವಳಿಯ ದಿನದಂತೆ ದೀಪದ ಬೆಳಕಿನಲ್ಲಿ ಮುಖ ತೊಳೆದುಕೊಂಡೆ. ಬಾಗಿಲಿನಲ್ಲಿ ಗಾಡಿಯೊಂದು ಕಾದು ನಿಂತಿತ್ತು. ಅದರಲ್ಲಿ ಕುಳ್ಳಿರಿಸಿದರು. ಇಬ್ಬರು ಪೋಲೀಸಿನವರೂ ಸಬ್ ಇನ್ಸ್ಪೆಕ್ಟರೂ ನನ್ನ ಜೊತೆಯಲ್ಲಿ ಗಾಡಿಯನ್ನೇರಿದರು. ಬಂದೂಕೊಂದು ಗಾಡಿಯಲ್ಲಿಡಲ್ಪಟ್ಟಿತು. ನಿಜವಾದ ಬಂದೂಕು!

ನನ್ನನ್ನು ಬೆಳಗ್ಗಿನ ರೈಲಿನಲ್ಲಿ ಕರೆದುಕೊಂಡು ಹೋಗುವರೆಂದು ಮೊದಲೇ ತಿಳಿದುಕೊಂಡಿದ್ದ ಸ್ನೇಹಿತರು ಕೆಲವರು ಈ ವೇಳೆಗಾಗಲೇ ಸ್ಟೇಷನ್ನಿಗೆ ಬಂದಿದ್ದರು. ನನ್ನ ಹಾಗೆ ಅವರು ಸಂತೋಷದಿಂದ ಮಲಗಿರಲಾರರು! ನನ್ನನ್ನು ಎಬ್ಬಿಸುವ ಕೆಲಸವು ಬೇರೆಯವರದು ಎಂದು ಧೈರ್ಯವಾಗಿ ಮಲಗಿದ್ದೆ! ಅವರುಗಳೋ, ರಾತ್ರಿಯೆಲ್ಲಾ ಮಧ್ಯೆ ಮಧ್ಯೆ ಎದ್ದು ಗಡಿಯಾರವನ್ನು ನೋಡಿಕೊಂಡೇ ಇದ್ದಿರಬೇಕು! ಇಲ್ಲದಿದ್ದರೆ ಇಷ್ಟು ಬೇಗ ಬರಲಾಗುತ್ತಿರಲಿಲ್ಲ.

ಸರ್ಕಾರದ ಖರ್ಚಿನಿಂದ ೩ ನೇ ತರಗತಿಯ ಪ್ರಯಾಣ! ಆದರೆ ರೈಲು ನಮಗೋಸ್ಕರ ಹೋಗುವುದೆ? ಅದು ಹೋಗುವ ಹೊತ್ತಿಗೆ ತಾನೆ ನಾವು ಹೋಗಬೇಕು? ರೈಲು ಹೊರಟಿತು; ಮೊದಲಸಲದ ಹಾಗೆ ಸೆರೆ ವಾಸಕ್ಕೆ ಹೋಗುತ್ತೇನೆಂಬ ಹಾಗಿರಲಿಲ್ಲ. ಎಲ್ಲಿಯೋ ಸಂಚಾರಕ್ಕೆ ಹೊರಟಹಾಗಿತ್ತು.

ಸೆರೆಯೊಳಕ್ಕೆ ಕರೆದುಕೊಂಡು ಹೋಗಿ ನನ್ನನ್ನು ನೂಕಿಬಿಡುವರೆಂದು ತಿಳಿದುಕೊಂಡಿದ್ದ ಸ್ನೇಹಿತರಿಬ್ಬರು ನನ್ನ ಜೊತೆಯಲ್ಲೇ ಬಂದರು. ಸ್ವಲ್ಪ

ಹೊತ್ತಿಗೆಲ್ಲಾ ಪೊನ್ಮಲೈ ಸ್ಟೇಷನ್ ಬಂತು. ಗಣಪತಿ ದೇವಸ್ಥಾನ ಗೋಚರ ವಾಯಿತು. ಮೂರು ತಿಂಗಳ ತುರಂಗವಾಸ ಮುಗಿದ ಮೇಲೆ ಪುನಃ ಇದೇ ದೇವಾಲಯವನ್ನು ದರ್ಶಿಸುವೆನೆಂಬ ಸಂತೋಷವುಂಟಾಯಿತು.

ಪೊನ್ಮಲೈ ಸ್ಟೇಷನ್ನಿನಲ್ಲಿ ಇಳಿದೆವು. ಬಾಡಿಗೆ ಗಾಡಿಯೊಂದರಲ್ಲಿ ಮುಂದಕ್ಕೆ ಪ್ರಯಾಣ ಬೆಳೆಸಿದೆವು. ಕಣ್ಣು ಮುಚ್ಚಿ ತೆರೆಯುವುದರೊಳಗೆ ಸೆರೆ ಮನೆ ಬಾಗಿಲ ಬಳಿ ಬಂದುಬಿಟ್ಟೆವು; ಆದರೆ ಸ್ವರ್ಗದ ಬಾಗಿಲು ತೆರೆಯುವುದು ಸುಲಭಸಾಧ್ಯವಲ್ಲ; ಅರ್ಧ ಘಂಟೆಯ ಹೊತ್ತು ಕಾದಿರಬೇಕಾಯಿತು.

* * *

ಇದೇ ತಿರುಚನಾಪಳ್ಳಿ ಸೆರೆ ಮನೆಗೆ ೩೦ ವರ್ಷದ ಹಿಂದೆ ಬಂದಿದ್ದೆ. ಅದೇ ನೋಟ; ಅದೇ ಹುಣಿಸೆಯ ಮರಗಳು. ನಿನ್ನೆ ತಾನೇ ನಡೆದ ಹಾಗೆ ಕೆಲವು ಸಂಭವಗಳು ಮನಸ್ಸಿನಲ್ಲಿ ಮೂಡಿದುವು.

ಹೊಸದಾಗಿ ಬಂದ ಕೈದಿಗಳನ್ನು ಒಡನೆ ಒಳಕ್ಕೆ ಕಳುಹಿಸುವ ಪದ್ಧತಿ ಯಿಲ್ಲ. ಹೊರಗೆ "ಕ್ವಾರಂಟೈನಿ"ನಲ್ಲಿ ೧೦ ದಿನಗಳು ಇಟ್ಟಿದ್ದು ವ್ಯಾಧಿಗ ಳೇನೂ ಇಲ್ಲವೇ ಎಂದು ನೋಡಿ, ಅನಂತರ ಒಳಗೆ ಕಳುಹಿಸುವರು. ಕ್ವಾರಂ ಟೈನಿನಲ್ಲಿ ಸಾಲಾಗಿ ಕೊಠಡಿಗಳು ಕಟ್ಟಲ್ಪಟ್ಟಿವೆ. ಬೇರೆ ಬೇರೆ ಕೊಠಡಿಗಳ ಲ್ಲಿಟ್ಟು ಬೀಗ ಹಾಕಿಬಿಡುವರು ಊಟದ ಹೊತ್ತಿನಲ್ಲಿ ಮಾತ್ರ ಹೊರಗೆ ಬಿಡುವರು. ಇಷ್ಟು ಬಂದೋಬಸ್ತು ಮಾಡಿಯೂ ಕೈದಿಗಳು ತಪ್ಪಿಸಿಕೊಂಡು ಹೋಗದಿರುವುದಕ್ಕಾಗಿ ಎರಡು ಕಾಲುಗಳಲ್ಲಿಯೂ ಕಬ್ಬಿಣದ ಬಳೆಗಳನ್ನು ಹಾಕಿ, ಅವುಗಳಿಗೆ ಎರಡು ಕಬ್ಬಿಣದ ಚಿಲಕಗಳನ್ನು ತಗುಲಿಸುವರು.

ಈ ತರಹ ಕಬ್ಬಿಣದ ಬಳೆ, ಚಿಲಕಗಳೊಡನೆ ೧೨ ದಿನಗಳಿದ್ದೆ. ಯಾವಾ ಗಲೂ ನನಗೆ ಒಡವೆಗಳನ್ನು ಕಂಡರಾಗದು; ಹಾಕಿಕೊಂಡಿರುವವರನ್ನು ಪರಿ ಹಾಸಮಾಡುವುದು ನನ್ನ ಪದ್ಧತಿ. ಇದಕ್ಕೆ ಪ್ರತಿಫಲವಾಗಿ ನನಗೆ ಈ ಬಳೆ ಸರಪಣಿಗಳನ್ನು ಹಾಕಿಕೊಳ್ಳುವಹಾಗಾಯಿತು. ನಡೆಯುವಾಗ ಝುಣ್, ಝುಣ್ ಎಂಬ ಶಬ್ದ ಕೇಳಿಸುವುದು. ರಾತ್ರಿ ಮಲಗುವದು ಬಹಳ ಕಷ್ಟ; ಒಂದುವೇಳೆ ನಿದ್ರೆ ಬಂದರೂ ಮಗ್ಗುಲಾಗುವಾಗ ಝುಣ್, ಝುಣ್ ಎಂಬ ಶಬ್ದ ಬೆಚ್ಚುವಂತೆ ಮಾಡಿ ಎಬ್ಬಿಸುವುದು; ಇದರ ಜೊತೆಗೆ ಕಾಲಿಗೆ ಪೆಟ್ಟುತಗಲಿ ನೋಯುವುದು.

ಈ ತರಹ ಬಳೆ ಸರಪಣಿಗಳೊಡನೆ ಕ್ವಾರ್ಟೈನಿನಿಂದ ಸುಮಾರು [illegible] ಫರ್ಲಾಂಗು ದೂರದಲ್ಲಿದ್ದ ಸೆರೆ ಬಾಗಿಲಿಗೆ ಬಂದು ಬೆಳಗ್ಗೆ ಗಂಜಿಯನ್ನೂ, ಮಧ್ಯಾಹ್ನ ಮತ್ತು ಸಾಯಂಕಾಲ ಊಟವನ್ನೂ ತೆಗೆದುಕೊಂಡು ಹೋಗಬೇಕು. ಮೊದಲ ದಿನ ಹೀಗೆ ನಾನು ಊಟವನ್ನು ತೆಗೆದುಕೊಂಡು ಹೋಗಲು ಬಂದಾಗ, ಒಬ್ಬ ಕೈದಿ ಮಿತ್ರರು ಒಳಗಿನಿಂದ ಊಟವನ್ನು ತೆಗೆದುಕೊಂಡು ಬಂದರು. ಅನ್ನಕ್ಕೆ ಒಂದು ಬಾಯಗಲವಾದ ಗಡಿಗೆಯನ್ನೂ, ಸಾರಿಗೆ ಒಂದು ಬಾಯಿ ಚಿಕ್ಕದಾದ ಗಡಿಗೆಯನ್ನೂ ಕೊಟ್ಟಿದ್ದರು. ಅನ್ನ, ಸಾರನ್ನು ಅವುಗಳಲ್ಲಿ ಹಾಕಿದ ನಂತರ ಕುರುಮಬಲೂರ್ ನಟೇಶಯ್ಯರ್ ನನ್ನನ್ನು ಪರಿತಾಪದಿಂದ ನೋಡಿದರು. ನಾನು ಅವರನ್ನು ಆಶ್ಚರ್ಯದಿಂದ ನೋಡಿದೆ. ಏಕೆಂದರೆ ಅವರ ಒಂದು ಕಾಲಲ್ಲಿ ಮಾತ್ರ ಕಬ್ಬಿಣದ ಬಳೆಯಿತ್ತು. ಇನ್ನೊಂದು ಕಾಲಿನಲ್ಲಿ ಏನೂ ಇರಲಿಲ್ಲ. ಅದರ ವಿಚಾರವಾಗಿ ಕೇಳಿದ್ದಕ್ಕೆ, ಕ್ವಾರ್ಟೈನಿನಲ್ಲಿರುವವರಿಗೆ ಮಾತ್ರ ಬಳೆ ಸರಪಣಿಗಳನ್ನು ಹಾಕಿರುವರೆಂದೂ, ಒಳಕ್ಕೆ ಬಂದ ಮೇಲೆ ತೆಗೆದು ಬಿಡುವರೆಂದೂ ತಿಳಿಯಿತು. ನನಗೆ ಅರ್ಧ ಜೀವ ಬಂದಂತಾಯಿತು; ಸೆರೆ ವಾಸವನ್ನು ಮುಗಿಸುವವರೆಗೂ ಹೀಗೆಯೇ ಇರಬೇಕೇನೋ ಎಂದು ಬಹಳ ಹೆದರಿದ್ದೆ.

ನಾಲ್ಕು ದಿನಗಳ ನಂತರ ಇದೇ ಸೆರೆ ಬಾಗಿಲಿನಲ್ಲಿ, ಇದೇ ಹುಣಿಸೆಯ ಮರದಡಿಯಲ್ಲಿ ಇನ್ನೊಂದು ಶೋಕಪೂರಿತ ದೃಶ್ಯವು ನಡೆಯಿತು. ನನ್ನ ತಾಯಿಯೂ, ಚಿಕ್ಕಮ್ಮನೂ ನನ್ನನ್ನು "ಇಂಟರ್‌ವ್ಯೂ" ಮಾಡಲು ಬಂದಿದ್ದರು. ನಾನು ಕ್ವಾರ್ಟೈನಿನಲ್ಲಿರುವಾಗಲೇ ಬಂದದ್ದರಿಂದ ಸೆರೆ ಬಾಗಿಲಿನಲ್ಲೇ ಇಂಟರ್‌ವ್ಯೂ ನಡೆಯಿತು. ಕಾಲ್ಗಳಲ್ಲಿ ಬಳೆ, ಸರಪಣಿ, ಮೋಟುತೋಳಿನ ಬನೀನು, ಅದೇ ಬಟ್ಟೆಯ ಮೋಟು ಚಡ್ಡಿ, ಇವುಗಳೊಡನೆ ಅಲಂಕೃತನಾಗಿ ಬಂದಾಗ, ಅವರಿಗೆ ನನ್ನ ಗುರುತೇ ಹತ್ತಲಿಲ್ಲ. ಹತ್ತಿರ ಹೋಗಿ, "ಅಮ್ಮಾ! ಚಿಕ್ಕಮ್ಮಾ! ಏತಕ್ಕಾಗಿ ಇಷ್ಟು ಅವಸರಪಟ್ಟುಕೊಂಡು ಬಂದುಬಿಟ್ಟಿರಿ?" ಎಂದು ನಾನು ಕೇಳಿದಾಗಲೇ ಅವರಿಗೆ ನನ್ನ ಗುರುತು ಸಿಕ್ಕಿದ್ದು. ಅಮ್ಮನಿಗೆ ಏನೂ ಮಾತನಾಡಲು ತೋರದೆ ನನ್ನನ್ನು ನೋಡುತ್ತಾ ನಿಂತುಬಿಟ್ಟಳು.

ನಿನ್ನ ಅಮ್ಮನು ನಿನ್ನನ್ನು ಹೆತ್ತು ಬೆಳಸಿದಳೆ ? '' ಎಂದು ಅಳುವುದಕ್ಕಾರಂಭಿಸಿ ಬಿಟ್ಟಳು. ನಾನು ಅವರನ್ನು ಸ್ವಲ್ಪ ಸಮಾಧಾನಪಡಿಸಿ, " ಅಮ್ಮಾ! ನಾನು ಒಡವೆಗಳನ್ನು ಹಾಕಿಕೊಳ್ಳಲಿಲ್ಲವೆಂದು ನೀನು ಬಹಳ ನೊಂದುಕೊಳ್ಳುತ್ತಿದ್ದೆಯಲ್ಲವೆ ? ಇದೋ ನೋಡು, ಬಳೆ ಸರಪಣಿ ! '' ಎಂದೆ. ಈ ಒಡವೆ ಸುಖವನ್ನು ಅವರು ನೋಡಿ ಸಹಿಸಲಾಗಲಿಲ್ಲ. ಬಹಳ ಶೋಕಭರಿತರಾಗಿ ಅಳಲಾರಂಭಿಸಿದರು.

* * *

ಕೊನೆಗೂ ಸ್ವರ್ಗದ ಬಾಗಿಲು ತೆರೆಯಲ್ಪಟ್ಟಿತು. ನಾನೂ ಹಳೆಯ ಕನಸು ಕಾಣುವುದನ್ನು ನಿಲ್ಲಿಸಿ ಒಳಕ್ಕೆ ಹೋದೆ. ಸೆರೆಮನೆಯ ಬಾಗಿಲುಗಳಲ್ಲಿ, ಗೋಪುರಗಳ ಬಾಗಿಲುಗಳ ಹಾಗೆ ಒಂದು ದೊಡ್ಡ ಬಾಗಿಲು, ಅದರೊಳಗೆ ಇನ್ನೊಂದು ಚಿಕ್ಕಬಾಗಿಲು ಇರುವುದು. ಸಾಧಾರಣವಾಗಿ ಈ ಚಿಕ್ಕ ಬಾಗಿಲಲ್ಲಿಯೇ ಒಳಕ್ಕೆ ಹೋಗಬೇಕು. ಒಳಕ್ಕೆ ಹೋಗುತ್ತಲೂ ಒಂದು ಅಂಗಳದ ಹಾಗಿರುವುದು. ಅದಾದ ಮೇಲೆ ಕಬ್ಬಿಣದ ಸಲಾಕೆಗಳುಳ್ಳ ಬಾಗಿಲು. ಈ ಎರಡು ಬಾಗಿಲುಗಳ ಮಧ್ಯೆ, ಒಳಕ್ಕೆ ಹೋಗುವವರೂ, ಹೊರಕ್ಕೆ ಬರುವವರೂ (ಕೈದಿಗಳೂ, ವಾರ್ಡರುಗಳೂ) ಪರಿಶೋಧಿಸಲ್ಪಡುವರು. ಮಹಡಿಯ ಮೇಲೆ ಜೈಲು ಆಫೀಸ್ ; ಸೂಪರಿಂಟೆಂಡೆಂಟ್, ಜೆಯಿಲರ್ ಇವರುಗಳು ಅಲ್ಲಿ ದರ್ಬಾರ್ ನಡೆಸುವರು.

ಅಂಗಳದ ಒಂದು ಪಕ್ಕದಲ್ಲಿ ವಿಶಾಲವಾದ ಕೊಠಡಿಯೊಂದುಂಟು. ಅದರಲ್ಲಿ ಹೊಸದಾಗಿ ಬಂದ ಕೈದಿಗಳನ್ನು ಶೋಧಿಸಿನೋಡುವರು. ಡೆಪ್ಯುಟಿ ಜೈಲರ್ — ಆಂಗ್ಲೋ ಇಂಡಿಯನ್ — ನಾನು ತೆಗೆದುಕೊಂಡು ಹೋಗಿದ್ದ ಸಾಮಾನುಗಳನ್ನೆಲ್ಲಾ ಅಡಿಮೇಲುಮಾಡಿ ಶೋಧಿಸಿ, ಒಂದು ಪಟ್ಟಿ ಬರೆದು, ಕೆಲವು ಸಾಮಾನುಗಳನ್ನು ಮಾತ್ರ ನನ್ನ ಕೈಲಿ ಕೊಟ್ಟರು. ೩ ಪಂಚೆ, ೩ ಬನೀನು, ೩ ಬಟ್ಟೆ, ೩ ಶಲ್ಯ, ಹಾಸಿಗೆ, ಹಲ್ಲುಜ್ಜಿಕೊಳ್ಳುವ ಬ್ರಷ್, ಹಲ್ಲು ಪುಡಿ—ಇವುಗಳನ್ನು ಕೊಟ್ಟಿದ್ದು ಎಷ್ಟೋ ಸಂತೋಷವನ್ನುಂಟುಮಾಡಿತು. ಪುನಃ ಕ್ಷೌರದ ಸಾಮಾನು ಕೊಡುತ್ತಲೂ ಆಶ್ಚರ್ಯವುಂಟಾಯಿತು.

ಹಿಂದಿನ ದಿನಗಳಲ್ಲಿ ಸೆರೆಮನೆಗಳಲ್ಲಿ ಕ್ಷೌರವೂ ಒಂದು ವಿಧವಾದ ದಂಡನೆ

ಯಾಗಿ ಭಾವಿಸಲ್ಪಟ್ಟಿತ್ತು. ಸಾಧಾರಣವಾಗಿ ತಗಡು ಚೂರುಗಳನ್ನು ಕ್ಷೌರದ ಕತ್ತಿಯ ಹಾಗೆ ಉಪಯೋಗಿಸುತ್ತಿದ್ದರು. ಈ ಕಷ್ಟವನ್ನು ಸಹಿಸಲಾರದೆ ಆ ಕಾಲದಲ್ಲಿ ಸೆರೆ ಮನೆಯಲ್ಲಿದ್ದ ದೇಶಭಕ್ತರು ಅನೇಕರು ದಾಡಿ ಬೆಳೆಸಿಕೊಂಡು ಬಿಟ್ಟಿದ್ದರು.

ಆದ್ದರಿಂದಲೇ, ಈಸಲ "ಷೇವಿಂಗ್ ಸೆಟ್" ಇಟ್ಟುಕೊಳ್ಳಲು ಅನು ಮತಿಯಿತ್ತದ್ದು ನನಗೆ ಬಹಳ ಉತ್ಸಾಹವನ್ನುಂಟುಮಾಡಿತು. ಇದೆಲ್ಲಾ ಕೊಟ್ಟ ಮೇಲೆ ಡೆಪ್ಯುಟಿ ಜೆಯಿಲರ್ ಒಂದು ಅಲ್ಯೂಮಿನಂ ತಟ್ಟೆಯನ್ನೂ ಒಂದು ಲೋಟವನ್ನೂ ನನಗೆ ಕೊಡುವಂತೆ ಹೇಳಿದರು. ಅವುಗಳನ್ನೂ ತೆಗೆದುಕೊಂಡೆ.

ಸೆರೆಯ ಬಾಗಿಲನ್ನು ತೆಗೆದು ಮತ್ತೆ ಹೊರಗೆ ಬಿಟ್ಟರು. ವಾರ್ಡರೊಬ್ಬನು ಹಾಸಿಗೆಯನ್ನು ಹೊತ್ತುಕೊಂಡು ಹಿಂದೆಯೇ ಬಂದನು. "ಏನಪ್ಪಾ ಸಿ. ಆರ್. ಎಲ್ಲಿರುವರು ಗೊತ್ತಿಗೆಯೇ? ಅವರನ್ನು ನೋಡಲು ಆಗುವುದೇ"? ಎಂದು ಕೇಳಿದೆ. "ನೋಡಲು ಆಗದೆ ಏನು ಸ್ವಾಮಿ? ಎಲ್ಲರೂ ಒಂದಾಗಿ ತಾನೇ ಇರುವರು? ಯಾರನ್ನು ಬೇಕಾದರೂ ನೋಡಬಹುದು. ಇದೇನು ಜೈಲೇ" ಎಂದು ಬದಲಿತ್ತನು ವಾರ್ಡರ್.

ಸೆರೆ ಮನೆಯ ಬಾಗಿಲ ಹೊರಗೆ ಒಂದು ಫರ್ಲಾಂಗ್ ದೂರದಲ್ಲಿಯೇ ಕ್ವಾರ್ಟೈನ್. ಅದರ ಹತ್ತಿರ ಬಂದ ಕೂಡಲೆ, ಒಳಗಿನಿಂದ ಶ್ರೀ ಭೂವರಾಹ ಯ್ಯಂಗಾರ್ ಬರುತ್ತಿರುವುದನ್ನು ನೋಡಿದೆ. "ಬನ್ನಿ, ಬನ್ನಿ, ಲೋಟ ತಟ್ಟೆಯನ್ನು ತೆಗೆದುಕೊಂಡಿದ್ದಾಯಿತೋ ಇಲ್ಲವೋ" ಎಂದು ಕೇಳಿ. ಅವರು ಘಟ್ಟಿಯಾಗಿ ನಕ್ಕರು. "ಒಳ್ಳೆಯ ಸ್ವಾಗತ; ೩ ತಿಂಗಳು ಸಂತೋಷವಾ ಗಿಯೇ ಕಾಲಕಳೆಯಬಹುದು" ಎಂದುಕೊಂಡೆ. "ನೀವೆಲ್ಲಿರುವಿರಿ? ನನ್ನನ್ನು ಎಲ್ಲಿ ಇಡುವರು?" ಎಂದು ಕೇಳಿದೆ. ಅವರು ನನ್ನ ಕೈ ಹಿಡಿದುಕೊಂಡು ನನ್ನ ಜೊತೆಯಲ್ಲಿಯೇ ಬರುತ್ತಾ, "ನಾವುಗಳು ಕೆಲವರು ಕ್ವಾರ್ಟೈನಿನಲ್ಲಿ. ಬಾಕಿ ಎಲ್ಲರೂ ಸಿವಿಲ್ ಜೈಲಿನಲ್ಲಿ" ಎಂದರು.

ಕ್ವಾರ್ಟೈನಿಗೆ ಸುಮಾರು ೧೦೦ ಗಜ ದೂರದಲ್ಲಿ ಸಿವಿಲ್ ಜೈಲ್ ಬಾಗಿಲಿರುವುದು. ಅಲ್ಲಿಯವರೆಗೆ ಜೈಲು ಪಕ್ಕದಲ್ಲಿಯೇ ನಡೆದುಹೋಗಬೇಕು,

"ಇದೇನು ಹೀಗೆ ಹೇಳುವವರು ಕೇಳುವವರಿಲ್ಲದೆ ನೀವು ನಿಮ್ಮ ಪಾಡಿಗೆ ತಿರುಗಾಡಿಕೊಂಡಿರುವಿರಲ್ಲಾ!" ಎಂದು ನಾನು ಭೂವರಾಹಯ್ಯಂಗಾರ್ಯರನ್ನು ಕೇಳಿದೆ. ಅದಕ್ಕೆ ಅವರು "ವಾರ್ಡರುಗಳಿಗೇ ನಿಮಗಿಂತ ಹೆಚ್ಚು ಆಶ್ಚರ್ಯ. ಹೀಗೆ ಬಂದೋಬಸ್ತಿಲ್ಲದೆ ಇದ್ದರೂ ಒಬ್ಬರಾದರೂ ತಪ್ಪಿಸಿಕೊಳ್ಳುವುದಿಲ್ಲವಲ್ಲಾ ಎಂದು ಅವರು ಬಹಳ ಆಶ್ಚರ್ಯಪಡುವರು. ನಿನ್ನೆ ಒಬ್ಬ ವಾರ್ಡರು ನನ್ನನ್ನು "ಜೈಲಿನಲ್ಲಿರುವುದು ನೀವೋ, ಇಲ್ಲಾ ನಾನೋ?" ಎಂದು ಹಾಸ್ಯಮಾಡಿದನು. ನನಗೆ ನಕ್ಕು ಹೊಟ್ಟೆ ಹುಣ್ಣಾಯಿತು ಎಂದು ಹೇಳಿಕೊಂಡು ಪುನಃ ಗಟ್ಟಿಯಾಗಿ ನಕ್ಕುಬಿಟ್ಟರು.

## ೬. ಮೊದಲನೆಯ ದಿನ

ಸಿವಿಲ್ ಜೈಲಿನೊಳಕ್ಕೆ ನುಸಿದೊಡನೆಯೇ ನನ್ನ ಕಣ್ಣು ಮುಂದೆ ಕಾಣಿಸಿದ ದೃಶ್ಯಗಳನ್ನೆಲ್ಲಾ ಒಂದು ನಿಮಿಷ ಎವೆಯಿಕ್ಕದೆ ನೋಡುತ್ತಾ ನಿಂತುಕೊಂಡೆ. ಸಾಲಾಗಿ ಬೆಳೆದು ನಿಂತಿದ್ದ ಹುಣಿಸೆ ಮರದ ನೆರಳಿನಲ್ಲಿ ತಮಿಳು ನಾಡಿನ ದೊಡ್ಡ ದೊಡ್ಡ ಮುಖಂಡರುಗಳೂ, ಮಾಜಿ ಮಂತ್ರಿಗಳೂ, ಎಂ. ಎಲ್. ಸಿ. ಗಳೂ ಇನ್ನೂ ಹಲವು ಪ್ರಮುಖರುಗಳೂ ಎಲ್ಲರೂ—ಸುಮಾರು ೨೦೦ ಜನ—೨ ಸಾಲಾಗಿ ಕುಳಿತುಕೊಂಡಿದ್ದರು. ಒಬ್ಬೊಬ್ಬರ ಮುಂದೆಯೂ ಒಂದೊಂದು ತಟ್ಟೆ, ಒಬ್ಬೊಬ್ಬರ ಪಕ್ಕದಲ್ಲೂ ಒಂದೊಂದು ಚೊಂಬೂ ಕಾಣಿಸಿತು. ಅನೇಕರು ನ್ಯೂಸ್ ಪೇಪರ್ ಕೆಳಗೆ ಹಾಕಿಕೊಂಡು ಅದರ ಮೇಲೆ ಕುಳಿತುಕೊಂಡಿದ್ದರು. "ಸರಿ! ಒಳ್ಳೆಯ ಸಮಯಕ್ಕೆ ಬಂದಹಾಗಾಯಿತು" ಎಂದುಕೊಂಡು ಅವರ ಪಕ್ಕದಲ್ಲಿ ನಾನೂ ಹೋಗಿ ಕುಳಿತುಕೊಂಡೆ. ಪಕ್ಕದಲ್ಲಿದ್ದವರು ಕುಶಲವನ್ನು ವಿಚಾರಿಸಿದರು. ನಾನು ಸೆರೆಮನೆಯ ಊಟದ ವಿಚಾರವಾಗಿ ಕೇಳಿದೆ. ಎ ಕ್ಲಾಸ್ ಮತ್ತು ಬಿ ಕ್ಲಾಸ್‌ನವರಿಗೆಲ್ಲಾ ಒಂದೇ ವಿಧವಾದ ಊಟವೆಂದೂ, ಊಟವು ನಮ್ಮವರ ಪೈಕಿ ಒಬ್ಬರ ಮೇಲ್ವಿಚಾರಣೆಯಲ್ಲೇ ತಯಾರಾಗುವುದೆಂದೂ ತಿಳಿಯಬಂತು. ಪಲ್ಯ, ಹುಳಿ, ಸಾರು, ಮಜ್ಜಿಗೆ ಇಷ್ಟೂ ಉಂಟೆಂದೂ ಒಂದು ಸೌಟು ತುಪ್ಪವನ್ನು ಸಹ ಕೊಡುವರೆಂದೂ ಹೇಳಿದರು.

"ಇದೇನು ಜೈಲು?" ಎಂದು ಕೊಳ್ಳುವಂತಾಯಿತು ನನ್ನ ಮನಸ್ಸಿಗೆ! ಮೊದಲೆರಡು ಸಲದ ಅನುಭವಗಳು ಇದಕ್ಕೆ ಪ್ರತಿಯಾಗಿತ್ತು. ಮಧ್ಯಾಹ್ನ

ಹುಳಿ; ಅನ್ನ. ಸಾಯಂಕಾಲ ಅನ್ನ, ಹುಳಿ, ಮಾರನೆಯ ದಿನ ಹುಳಿಯಲ್ಲಿ ಕಲಿಸಿದನ್ನ ಹೀಗೆಯೇ ತಿಂದು—ಕೆಲವು ಸಮಯ ತಿನ್ನದೆಯೂ—ಕಾಲವನ್ನು ತಳ್ಳಿದ್ದೆವು. ಆ ಹುಳಿ ತಾನೆ ಹೇಗಿರುತ್ತಿತ್ತು? ಮಧ್ಯಾಹ್ನ ಮೂಲಂಗಿ ಹುಳಿ, ಸಾಯಂಕಾಲ ಮೂಲಂಗಿ ಸೊಪ್ಪಿನ ಹುಳಿ, ಮಾರನೆಯ ದಿನವೂ ಮೂಲಂಗಿ ಹುಳಿ, ಅದಕ್ಕೂ ಮರುದಿವಸ ಮೂಲಂಗಿ ವಾಸನೆ ಹುಳಿ — ಹೀಗೆಯೇ. "ಮೂಲಂಗಿ ವಾಸನೆ ಹುಳಿ" ಹೇಗೆ ಮಾಡುವುದೆಂದು ಕೆಲವರು ತಿಳಿದುಕೊಳ್ಳ ಲಾಪಿಸಬಹುದು. ಮುಖ್ಯವಾಗಿ ಪತ್ರಿಕೆಗಳಿಗೆ ಅಡಿಗೆ ವಿಚಾರವಾಗಿ ಬರೆದು ಕೊಡುವ ನಾರೀಮಣಿಗಳು ಇದನ್ನು ತಿಳಿದುಕೊಳ್ಳಬೇಕೆಂದು ಬಯಸಬಹುದು. ಅವರು ಮೂಲಂಗಿಯನ್ನು ತೊಳೆದ ತಣ್ಣೀರನ್ನು ಇಟ್ಟು ಹುಳಿ ಮಾಡಿಬಿಟ್ಟರೆ ಮೂಲಂಗಿ ವಾಸನೆ ಹುಳಿಯಾಗುವುದು! ಇಲ್ಲದಿದ್ದರೆ ಹುಳಿ ಕುದಿಯುತ್ತಿರು ವಾಗ ಪಕ್ಕದಲ್ಲಿ ನಿಂತುಕೊಂಡು "ಮೂಲಂಗಿ, ಮೂಲಂಗಿ" ಎಂದು ಜಪಿಸಿ ಬಿಟ್ಟು "ಇವತ್ತು ಮೂಲಂಗಿ ಹುಳಿ" ಎಂದು ಹೇಳಿಬಿಟ್ಟರಾಯಿತು. ತಿನ್ನು ವವರು ಮನಸ್ಸಿನಲ್ಲೇ ಮೂಲಂಗಿ ವಾಸನೆಯನ್ನು ಕಲ್ಪಿಸಿಕೊಂಡು ಊಟ ಮಾಡುವರು.

ಈ ತರಹ ಸೆರೆವಾಸವನ್ನನುಭವಿಸಿ ಈಗ ಪಲ್ಯ, ಹುಳಿ, ಮಜ್ಜಿಗೆ, ತುಪ್ಪ ಇಷ್ಟೂ ಇದೆಯೆಂದರೆ, "ಇದು ಜೈಲೇ?" ಎಂದು ನನಗೆ ತೋರುವುದರಲ್ಲಿ ಅತಿಶಯವೇನು? ಆದರೆ ಮೊಟ್ಟಮೊದಲು ಹೊಸದಾಗಿ ಜೈಲಿಗೆ ಬಂದವರಿಗೆ ಹಾಗೆ ತೋರಿರಲಾರದು. ಅವರುಗಳಲ್ಲಿ ಕೆಲವರು ಜಮೀನ್ದಾರರು; ಕೆಲವರು ಅರ್ಧ ಮುದುಕರು; ಕೆಲವರು ಮೇಜಿನ ಮೇಲಿಟ್ಟುಕೊಂಡು ಊಟಮಾಡಿ ಅಭ್ಯಾಸವಿದ್ದವರು; ಒಬ್ಬಿಬ್ಬರು ಊಟವಾದೊಡನೆಯೇ ಜವಾನನ ಕೈಲಿ ಕೈ- ತೊಳಸಿಕೊಳ್ಳುತ್ತಿದ್ದವರು!

ಪಕ್ಕದಲ್ಲಿದ್ದ ಸ್ನೇಹಿತರನ್ನು, "ಎಲ್ಲರೂ ಪಂಕ್ತಿಯಲ್ಲಿ ಕುಳಿತುಕೊಂಡೇ ಊಟಮಾಡುತ್ತಾರೆಯೇ?" ಎಂದು ಕೇಳಿದೆ. "ಕೆಲವರು ಊಟವನ್ನು ತೆಗೆದುಕೊಂಡು ಹೋಗಿ ಊಟಮಾಡುವರು. ಅವರು ೮-೧೦ ಜನರಿರಬಹುದು" ಎಂದರು.

ದೊಡ್ಡ ದೊಡ್ಡ ತಪ್ಪಲೆಗಳಲ್ಲಿಯೂ, ಕೊಳಗದಪ್ಪಲೆಗಳಲ್ಲಿಯೂ ಊಟವನ್ನು ತಂದಿಟ್ಟಿದ್ದರು. ಅಲ್ಲಿ ಡಾಕ್ಟರ್ ಸುಬ್ಬರಾಯರು ತಮ್ಮ ಕೈಯಲ್ಲಿ ಒಂದು ತಟ್ಟೆ ಹಿಡಿದುಕೊಂಡು ನಿಂತಿದ್ದರು. ಊಟವನ್ನು ತೆಗೆದುಕೊಂಡು ಹೋಗಿ ತಿನ್ನುವವರಲ್ಲಿ ಇವರೂ ಒಬ್ಬರು ಎಂದು ತಿಳಿದುಕೊಂಡೆ. ರಾಮ! ರಾಮ! ಹೀಗೆ ತಟ್ಟೆಯನ್ನು ಹಿಡಿದುಕೊಂಡು ಊಟಕ್ಕೆ ಕಾದುಕೊಂಡು ನಿಂತುಕೊಳ್ಳುವಂತೆ ಅವರ ಹಣೆಯಲ್ಲಿ ಬರೆದಿತ್ತೇ? ಅವರ ಮನೆಯಲ್ಲಿ ನಾನು ನೋಡಿದ್ದೇನೆ; ಆಂಗ್ಲ ದೊರೆಗಳಂತೆ ಮೇಜಿನ ಮೇಲೆ ಊಟಮಾಡುವುದೇ ಅವರ ಪದ್ಧತಿ!

ಒಡನೇ ರಾಜಾಜಿಯ ಜ್ಞಾಪಕ ಬಂತು. "ರಾಜಾಜಿ ಪಂಕ್ತಿಗೆ ಊಟಕ್ಕೆ ಬರುವುದುಂಟೋ?" ಎಂದು ಕೇಳಿದೆ. "ಅದೋ ನೋಡಿ" ಎಂದು ಅವರ ಕಡೆ ಕೈತೋರಿಸಿದರು ನನ್ನ ಮಿತ್ರರು. ಪಂಕ್ತಿಯ ನಡುವೆ ಮಧ್ಯದಲ್ಲಿ ಇರುವ ಜಾಗವೇ ತಿಳಿಯದಂತೆ ಚಿಕ್ಕದಾಗಿ ಕುಳಿತುಕೊಂಡಿದ್ದರು ರಾಜಾಜಿ! ಅವರ ಅಕ್ಕಪಕ್ಕಗಳಲ್ಲಿ ಶ್ರೀ ಗೋಪಾಲರೆಡ್ಡಿಯೂ, ಶ್ರೀ ಮುನಿಸ್ವಾಮಿಪಿಳ್ಳೆಯೂ ಕುಳಿತಿದ್ದರು.

"ಯಾರಾದರೂ ಬರಲಿ, ಯಾರಾದರೂ ಬಿಡಲಿ, ರಾಜಾಜಿ ತಪ್ಪಿಸಿಕೊಳ್ಳುವುದಿಲ್ಲ. ಎರಡು ಹೊತ್ತೂ ಪಂಕ್ತಿಯಲ್ಲಿ ಕುಳಿತುಕೊಂಡೇ ಊಟ ಮಾಡುವರು" ಎಂದು ನನ್ನ ಮಿತ್ರರು ಹೇಳಿದರು.

ಈ ಸಮಯದಲ್ಲಿ "ಹೋ! ಹೂ! ಉಷ್! ಹಷ್!" ಎಂದು ಏಕಕಾಲದಲ್ಲಿ ಶಬ್ದವು ಹೊರಡಲು, ಇದೇನೆಂದು ಆಶ್ಚರ್ಯದೊಡನೆ ತಲೆಯೆತ್ತಿ ನೋಡಿದೆ. ಹುಣಸೇಮರದ ಕೊಂಬೆಗಳ ಮೇಲೆ ಕುಳಿತುಕೊಂಡಿದ್ದ ಕಾಗೆಗಳನ್ನು ದೇಶಭಕ್ತರುಗಳು ಓಡಿಸುತ್ತಿರುವರೆಂದು ತಿಳಿಯಿತು. ಊಟ ಮಾಡುತ್ತಿರುವ ಸಮಯದಲ್ಲಿ ಕಾಗೆಗಳು ಏನಾದರೂ ಅಸಂದರ್ಭ ಮಾಡಿಬಿಡುವುವೋ ಎಂಬ ಭಯ! ಆದ್ದರಿಂದಲೇ ನಮ್ಮ ದೇಶದ ಮುಖಂಡರ ವಿಚಾರವಾಗಿ, "ಎಂಜಲು ಕೈಲಿ ಕಾಗೆ ಓಡಿಸದವರು" ಎಂಬ ಗಾದೆ ಹೇಳುವುದಕ್ಕೆ ಸ್ವಲ್ಪವೂ ಆಸ್ಪದವಿಲ್ಲವೆಂದು ತೀರ್ಮಾನಿಸಿಕೊಂಡೆ.

ಇಷ್ಟರೊಳಗೆ ಬಡಿಸುವುದಕ್ಕಾರಂಭಿಸಿದರು. ೧೦-೧೫ ಜನ ಬಡಿಸಿದರು.

ಅವರು ಎಷ್ಟು ಓಡಿ ಓಡಿ ಬಂದು ಬಡಿಸಿದರೂ ಕೂಡ ಒಂದು ಮೂಲೆಯಿಂದ, ಇನ್ನೊಂದು ಮೂಲೆಗೆ ಬರುವುದಕ್ಕೆ ಸ್ವಲ್ಪಹೊತ್ತು ಹಿಡಿಯುತ್ತದೆ. ಕುಳಿತುಕೊಂಡ ಅರ್ಧ ಘಂಟೆಗೆ ಪಲ್ಯ ಬಂತು, ಸರಿ ಅದರ ಹಿಂದೆ ಒಂದರಮೇಲೊಂದರಂತೆ ಅನ್ನ, ಹುಳಿ, ಸಾರು, ಮಜ್ಜಿಗೆ ಎಲ್ಲಾ ಬಂದುಬಿಟ್ಟಿತು. ಬಂದಿದ್ದು ಹೊರಟುಹೋದರೆ ಪುನಃ ಬರಲಾರದೆಂದುಕೊಂಡು, ಅರ್ಧ ಹುಳಿಯನ್ನಕ್ಕೆ ಸಾರು ಹಾಕಿಕೊಂಡು, ಮಜ್ಜಿಗೆಯನ್ನೂ ಅದಕ್ಕೇ ಹಾಕುವಂತೆ ಹೇಳಿದೆ. ಈ ಸಮಯದಲ್ಲಿ ಒಬ್ಬರು ಒಂದು ತವರದ ಪಾತ್ರೆಯಲ್ಲಿ ಏನನ್ನೋ ತೆಗೆದುಕೊಂಡು ಬಂದು 'ತುಪ್ಪ' ಎಂದರು. ಅದರ ವಾಸನೆ ಸ್ವಲ್ಪ ಮೂಗಿಗೆ ಬಂತೋ ಇಲ್ಲವೋ, "ನನ್ನ ಭಾಗದ ತುಪ್ಪವನ್ನು ಬೆಂಗಳೂರಿನಲ್ಲಿರುವ ಇಟಾಲಿಯನ್ ಕೈದಿಗಳಿಗೆ ಕಳುಹಿಸಿಬಿಡಿ. ಪಾಪ! ಅವರು ಬೆಂಗಳೂರಿನ ಛಳಿಯಲ್ಲಿ ಬಹಳ ಕಷ್ಟಪಡುತ್ತಿರುವರು" ಎಂದೆ. ಊಟ ಮುಗಿಸಿ ಏಳುವ ಸಮಯದಲ್ಲಿ ಉಪ್ಪನ್ನು ತೆಗೆದುಕೊಂಡು ಒಬ್ಬರು ಓಡೋಡಿ ಬಂದರು.

"ಮಜ್ಜಿಗೆ ಅನ್ನಕ್ಕೆ ತುಪ್ಪವನ್ನೂ, ಊಟ ಮುಗಿದ ಮೇಲೆ ಉಪ್ಪನ್ನೂ ತಂದುಹಾಕುವಿರಲ್ಲಾ?" ಎಂದು ಜಗಳವಾಡಲೇ ಎನ್ನಿಸಿತು. ಆದರೆ ಬಡಿಸಿದವರನ್ನು ನೋಡಿ ಧೈರ್ಯವು ಕುಂದಿಹೋಯಿತು. ಅವರಲ್ಲಿ ಕೆಲವರು ಎಂ. ಎಲ್. ಸಿ. ಗಳು; ಕೆಲವರು ಎಂ. ಎಲ್. ಎ. ಗಳು; ೩೦ ಸಾವಿರ ೪೦ ಸಾವಿರ ವೋಟುಗಳನ್ನು ತೆಗೆದುಕೊಂಡು ಬಂದಂಥವರು. ಆದ್ದರಿಂದ ಅವರನ್ನು "ಬಡಿಸುವುದಕ್ಕೆ ಯಾತಕ್ಕೆ ಬರುವುದಿಲ್ಲ?' ಎಂದು ಕೇಳುವುದರಲ್ಲಿ ಪ್ರಯೋಜನವಿಲ್ಲ. ಹೊರಗೆ ಹೋದಮೇಲೆ ಅವರನ್ನು ಕಳುಹಿಸಿದ ವೋಟರುಗಳನ್ನು ಕೇಳಬೇಕು. "ಊಟವನ್ನು ಸರಿಯಾಗಿ ಬಡಿಸುವುದಕ್ಕೆ ತಿಳಿಯದವರನ್ನೆಲ್ಲಾ ನಿಮ್ಮ ಪ್ರತಿನಿಧಿಗಳಾಗಿ ಕಳುಹಿಸಿಬಿಟ್ಟಿರಲ್ಲಾ?" ಎಂದು ಜಗಳವಾಡಬೇಕು. ಹೀಗೆಂದುಕೊಂಡು ಮಾತನಾಡದೇ ಇದ್ದುಬಿಟ್ಟೆ.

ಊಟವಾಗುತ್ತಲೇ ಎಲ್ಲರೂ ಕೈಯಲ್ಲಿ ತಟ್ಟೆಯನ್ನೂ ಚೊಂಬನ್ನೂ ಹಿಡಿದುಕೊಂಡು ಹೊರಟರು. ಮುಕ್ಕಾಲು ಫರ್ಲಾಂಗ್ ದೂರದಲ್ಲಿದ್ದ ಕೊಳಕ್ಕೆ ಹೋಗಿ ಸೇರಿದೆವು. ಸುಮಾರು ೩ ಅಡಿ ಅಗಲವೂ, ೩೦ ಅಡಿ ಆಳವೂ ಇರುವ

ಕೊಳದಲ್ಲಿ ೨ ಅಂಗುಲ ನೀರಿತ್ತು. ಅದರಲ್ಲೇ ಎಲ್ಲರ ಹಾಗೆ ನಾನು ತಟ್ಟೆಯನ್ನೂ, ಕೈಯನ್ನೂ ತೊಳೆದುಕೊಂಡೆ. ಆ ಕೊಳಕು ನೀರಿನಲ್ಲಿ ಕೈ ತೊಳೆಯುವುದು ಬಹು ಕಷ್ಟವಾಗಿತ್ತು. ಆದರೆ ೧೯೨೨ ರಲ್ಲಿ ಕುಡಿಯುವುದಕ್ಕೇ ನೀರು ಸಿಕ್ಕುತ್ತಿರಲಿಲ್ಲ.

ಎಲ್ಲರಂತೆ ರಾಜಾಜಿಯವ ಆ ಸಿಡಿಯುವ ಬಿಸಿಲಿನಲ್ಲಿ ಅಷ್ಟು ದೂರ ನಡೆದುಕೊಂಡು ಬಂದು ತಟ್ಟೆಯನ್ನು ತೊಳೆದುಕೊಂಡಿದ್ದರು. ಅವರ ತಲೆಗೆ ಬಿಸಿಲು ಹೊಡೆಯುತ್ತಿತ್ತು. ಮನೆಯಲ್ಲಿ ಅವರ ಕುಮಾರಿ, ಕೈ ತೊಳೆಯಲು ಹಿತ್ತಲು ಕಡೆ ಹೋಗುವುದು ಕೂಡ ಶ್ರಮವೆಂದು ಅವರ ಪಕ್ಕದಲ್ಲಿ ಒಂದು ದೊಡ್ಡ ಪಿಂಗಾಣಿ ಬೇಸಿನ್ ಇಡುತ್ತಿದ್ದುದನ್ನು ನಾನು ನೋಡಿದ್ದೇನೆ.

" ರಾಜಾಜಿಯು ಏತಕ್ಕಾಗಿ ಇಷ್ಟು ದೂರ ತಟ್ಟೆ ತೊಳೆದುಕೊಳ್ಳಲು ಬರಬೇಕು ? ಬ್ಲಾಕಿನ ಪಕ್ಕದಲ್ಲಿಯೇ ತೊಳೆಯಕೂಡದೇ ? ಯಾರಾದರೂ ನೀರು ತಂದು ಕೊಡಲಾರರೇ ? " ಎಂದು ಕೇಳಿದೆ

"ತಂದು ಕೊಡಲಾರರೇ ಏನು ? ಅವರ ಸೇವೆ ಮಾಡಲು ಎಲ್ಲರೂ ಕಾದುಕೊಂಡಿರುವರು. ಆದರೆ ಅವರು ತಾವು ಬ್ಲಾಕಿನ ಹತ್ತಿರ ತೊಳೆದುಕೊಳ್ಳಲಾರಂಭಿಸಿದರೆ ಎಲ್ಲರೂ ತೊಳೆಯತೊಡಗುವರು. ಜಾಗವು ಕೊಳಕಾಗಿ ಬಿಡುವುದು ಎಂದು ಹಟವಾಗಿ ಇಲ್ಲಿಗೇ ಬಂದು ತೊಳೆದುಕೊಂಡು ಹೋಗುವರು " ಎಂದು ಬದಲು ಬಂತು.

## ೭. ಉಭಯಕುಶಲೋಪರಿ

ಸ್ವಲ್ಪ ಹೊತ್ತಿಗೆಲ್ಲಾ ಸಿವಿಲ್ ಜೈಲಿಗೆ ಹೋದೆ. ಸಿವಿಲ್ ಜೈಲ್ ಬಾಗಿಲ ಮೂಲಕ ಪ್ರವೇಶಿಸಿದೊಡನೆಯೇ ಬಲಗಡೆ ಇರುವುದೇ ರಾಜಾಜಿಯ ಬ್ಲಾಕ್. ಅವರು ಅಲ್ಲಿದ್ದುದರಿಂದ ಆ ಬ್ಲಾಕಿಗೆ 'ಸಿ. ಆರ್. ಬ್ಲಾಕ್' ಎಂದು ಹೆಸರು ಬಂದುಬಿಟ್ಟಿತ್ತು. ಬ್ಲಾಕ್ ಎಂಬುವುದು ಮಧ್ಯದಲ್ಲಿ ಕಂಬಿಗಳಿಲ್ಲದ ಒಂದು ಉದ್ದವಾದ ರೈಲ್ವೆ ಕಂಪಾರ್ಟ್‌ಮೆಂಟ್ ಮಾದರಿ ಇರುವುದು. ಅಗಲ ರೈಲಿಗಿಂತ ಸ್ವಲ್ಪ ಹೆಚ್ಚು. ಉದ್ದ ಒಂದು ದೊಡ್ಡ ರೈಲ್ವೆ ಡಬ್ಬಿಯಷ್ಟು. ಕಲ್ಲಿ

ಕೋಟೆ ಹೆಂಚಿನ ಮೇಲ್ಛಾವಣಿ. ಈ ಕೊಠಡಿಗಳ ಒಂದು ಭಾಗದಲ್ಲಿಯೇ ರಾಜಾಜಿಯೂ ಇರುವರು ; ಅವರ ಪಕ್ಕದ ಭಾಗದಲ್ಲಿ ಶ್ರೀ ಮುನಿಸ್ವಾಮಿಪಿಳ್ಳೆ—ಇಬ್ಬರಿಗೂ ಸೇರಿ ೧೦ ಅಡಿ ಚದುರವುಳ್ಳ ಜಾಗ. ಇನ್ನೂ ಈ ಬ್ಲಾಕಿನಲ್ಲಿ ಶ್ರೀ ಗೋಪಾಲರೆಡ್ಡಿ, ಡಾಕ್ಟರ್ ರಾಜನ್ ಮೊದಲಾದ ಹನ್ನೆರಡು ಜನರಿದ್ದರು. ಇವರೆಲ್ಲರೂ 'ಎ' ಕ್ಲಾಸ್ ಕೈದಿಗಳು. ಒಬ್ಬೊಬ್ಬರಿಗೂ ಒಂದೊಂದು ಮಂಚ, ಒಂದು ಚಿಕ್ಕ ಮೇಜು, ಒಂದು ಚಿಕ್ಕ ಕುರ್ಚಿ, ಒಂದು ಕಮೋಡು ಇಷ್ಟು ಕೊಟ್ಟಿದ್ದರು.

ನಾನು ಹೋದಾಗ ರಾಜಾಜಿ ಆಗತಾನೇ ಬಂದಿದ್ದ ವೃತ್ತಪತ್ರಿಕೆಯನ್ನು ಬಿಚ್ಚಿ ಓದುತ್ತಿದ್ದರು. ನನ್ನನ್ನು ನೋಡಿದ ಕೂಡಲೇ, "ಇದೇನು ಆಶ್ಚರ್ಯ! ಈಗ ತಾನೇ ನಿನ್ನ ವಿಷಯವಾಗಿ ಪತ್ರಿಕೆಯಲ್ಲಿ ಓದುತ್ತಿದ್ದೇನೆ. ಎದುರಿಗೆ ನೀನೇ ನಿಂತಿರುವೆಯಲ್ಲಾ?" ಎಂದರು.

ನನ್ನ ವಿಚಾರಣೆ, ದಂಡನೆ ಇವುಗಳ ವಿಷಯವೆಲ್ಲಾ ಹೇಳಿ, "ತಮ್ಮ ದೇಹಸ್ಥಿತಿ ಹೇಗಿದೆ?" ಎಂದು ಕೇಳಿದೆ. "ಇಲ್ಲಿ ಶ್ರೀ ಮುನಿಸ್ವಾಮಿಪಿಳ್ಳೆಯವರು ಇರುವತನಕ ನನ್ನ ದೇಹ ಸೌಖ್ಯಕ್ಕೆ ಏನು ಯೋಚನೆ?" ಎಂದರು. (ನೆರೆಮನೆಯಲ್ಲಿ ರಾಜಾಜಿಯ ತಾಯಿ, ಗಾರ್ಡಿಯನ್, ಕಾರ್ಯದರ್ಶಿ, ಕಾವಲುಗಾರ ಎಲ್ಲವೂ ಆಗಿದ್ದವರು ಶ್ರೀ ಮುನಿಸ್ವಾಮಿಪಿಳ್ಳೆ ಎಂದು ತಿಳಿದುಬಂತು.) ಮತ್ತೆ ಮುಗುಳ್ನಗೆಯೊಂದಿಗೆ, "ಆದರೆ ನಿನಗೆ ಇಲ್ಲಿ ಬಿಸಿಲು ತಾಪ ಬಹಳ ಹೆಚ್ಚಲ್ಲವೇ! ಮೇಲೆ ಕಲ್ಲಿಕೋಟೆ ಹೆಂಚು" ಎಂದರು. ಪುದುಪಾಳ್ಯಂ ಗಾಂಧಿ ಆಶ್ರಮದಲ್ಲಿ ಇದ್ದಾಗ ಕಲ್ಲಿಕೋಟೆ ಹೆಂಚಿನ ವಿಷಯವಾಗಿ ನಾನು ಆಕ್ಷೇಪಿಸಿದ್ದೆ. ಅದನ್ನು ರಾಜಾಜಿ ಮರೆತಿರಲಿಲ್ಲ. ನಾನು ಬಿಸಿಲಿಗೆ ಹೆದರುವವನು ಎಂದು ಆಡಿಗಡಿಗೆ ಹಾಸ್ಯ ಮಾಡುವುದುಂಟು. ಅದನ್ನೇ ಜ್ಞಾಪಕ ಮಾಡಿಕೊಂಡು ಈಗಲೂ ಹಾಸ್ಯ ಮಾಡಿದರು. ಅದಕ್ಕೆ ನಾನು, "ನನಗೇನೂ ಕಷ್ಟವಿಲ್ಲ. ಮೂರು ತಿಂಗಳಿಗೆಲ್ಲಾ ಹೊರಟುಹೋಗುತ್ತೇನೆ. ನೀವು ತಾನೇ ಏಪ್ರಿಲ್, ಮೇ ತಿಂಗಳಲ್ಲಿ ಇಲ್ಲಿರಬೇಕು" ಎಂದೆ. ನ್ಯಾಯವಾಗಿ ನೋಡಿದರೆ ರಾಜಾಜಿಗೆ ೧೦ ವರ್ಷಗಳ ಹಿಂದೆ ತಡೆಯುತ್ತಿದ್ದ ಹಾಗೆ ಬಿಸಿಲು ತಾಪವನ್ನು ಈಗ ತಡೆಯಲಾಗುತ್ತಿರಲಿಲ್ಲ. ಈ ವಿಷಯ ನನಗೆ ಮೊದಲೇ ಗೊತ್ತಿತ್ತು.

ಇಷ್ಟರೊಳಗೆ ಅಣ್ಣಾಮಲೆಪಿಳ್ಳೆ ಅಲ್ಲಿಗೆ ಬಂದರು. ಅವರು ಹೋದ ವರ್ಷ ತಮಿಳುನಾಡು ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿದ್ದವರು, ಸೆರೆ ಮನೆಯಲ್ಲಿಯೂ ಒಂದು ವಿಧವಾದ ಕಾರ್ಯದರ್ಶಿತ್ವವನ್ನೇ ಮಾಡುತ್ತಾರೆಂದು ತಿಳಿಯಬಂತು. ರಾಜಾಜಿ ಅವರ ಹತ್ತಿರ "ಇವರು ಹೊಸದಾಗಿ ಬಂದಿರುವರು. ಒಳ್ಳೆಯ ಸ್ಥಳವನ್ನು ನೋಡಿಕೊಡಿ" ಎಂದು ಹೇಳಿದರು. "ಎಲ್ಲಾ ಬ್ಲಾಕಿನಲ್ಲೂ ಈ ಕಲ್ಲಿಕೋಟೆ ಹೆಂಚೇತಾನೆ ?" ಎಂದು ಕೇಳಿದೆ. "ಬ್ಲಾಕೆಲ್ಲಾ ಹೆಂಚೇ; ಆದರೆ ಕ್ವಾರಂಟೈನಿನದೆ 'ಟೆರೇಸ್' ಹಾಗೇ ಇರುವುದು" ಎಂದರು ಪಕ್ಕದಲ್ಲಿದ್ದವರೊಬ್ಬರು. ಶ್ರೀ ಅಣ್ಣಾಮಲೈಪಿಳ್ಳೆ, "ನೀವು ಕ್ವಾರಂಟೈನಿಗೆ ಮಾತ್ರ ಹೋಗಬೇಡಿ. ಅಲ್ಲಿ ಬೇರೆ ಬೇರೆ ಕೊಠಡಿ; ರಾತ್ರಿಯಲ್ಲಿ ಒಬ್ಬರನ್ನೇ ಒಳಗೆ ಸೇರಿಸಿ ಬೀಗ ಹಾಕಿಬಿಡುವರು. ಬ್ಲಾಕಿನಲ್ಲಾದರೆ ಎಲ್ಲರೂ ಕೂಡಿಕೊಂಡು ಖುಷಿಯಾಗಿರಬಹುದು" ಎಂದು ಹೇಳಿ, ತಮ್ಮ ಬ್ಲಾಕಿಗೆ ಕರೆದುಕೊಂಡು ಹೋದರು. ಅದಕ್ಕೆ 'ಜಲಮಂಡಲಿ ಬ್ಲಾಕ್' ಎಂದು ಹೆಸರಂತೆ. ಏಕೆಂದರೆ, ಸತ್ಯಾಗ್ರಹ ಕೈದಿಗಳು ಬಂದ ಹೊಸದರಲ್ಲಿ ಅಲ್ಲಿ ಜಲಮಂಡಲಿಗಳು ಹೆಚ್ಚಾಗಿ ಬರುತ್ತಿದ್ದುವಂತೆ. ಈ ಸಮಾಚಾರ ನನಗೆ ಅಷ್ಟೇನೂ ಉತ್ಸಾಹವನ್ನುಂಟುಮಾಡಲಿಲ್ಲ. ಆದರೂ ಕಾರ್ಯದರ್ಶಿ ಕರೆಯುವರಲ್ಲಾ ಎಂದು ಹೋದೆ. ಆ ಬ್ಲಾಕೂ ರಾಜಾಜಿಯ ಬ್ಲಾಕಿನಂತೆಯೇ ಇತ್ತು. ಅಲ್ಲಿ ಶ್ರೀ ಭಕ್ತವತ್ಸಲಂ ಇದ್ದರು. ಮಾತನಾಡುತ್ತಿರುವಂತೆಯೇ ಒಂದು ವಿಷಯ ಹೊರಬಿದ್ದಿತು. ಚಿತ್ತೂರಿನ ಪ್ರಮುಖ ವಕೀಲರಾದ ಶ್ರೀ ಅನಂತಶಯನಮ್ಮಯ್ಯಂಗಾರ್ಯರೂ ಶ್ರೀ ವರದಾಚಾರ್ಯರೂ ಸಂಗೀತಗಾರರೆಂದೂ, ಆ ಬ್ಲಾಕಿನಲ್ಲಿರುವವರು ಕೆಲವರು ಅವರ ಹತ್ತಿರ ಸಂಗೀತವನ್ನು ಕಲಿತುಕೊಳ್ಳುವರೆಂದೂ, ಶ್ರೀ ಭಕ್ತವತ್ಸಲಂ ಹೇಳಿದರು. "ಸಂಗೀತವನ್ನು ಕಲಿತುಕೊಳ್ಳುವವರಲ್ಲಿ ಶ್ರೀ ಅಣ್ಣಾಮಲೈಪಿಳ್ಳೆಯೂ ಒಬ್ಬರು" ಎಂದು ಅವರು ಹೇಳಿದರೋ ಇಲ್ಲವೋ ನನ್ನ ಮನಸ್ಸನ್ನು ದೃಢಪಡಿಸಿಕೊಂಡೆ. "ಬಹಳ ವಂದನೆಗಳು, ಭಕ್ತವತ್ಸಲರೇ! ಒಳ್ಳೆಯ ಸಮಯಕ್ಕೇ ಎಚ್ಚರಿಕೆಯಿತ್ತಿರಿ! ನಾನು ಈ ಬ್ಲಾಕಿನ ಕಡೆಯೇ ಬರುವುದಿಲ್ಲ" ಎಂದೆ. "ಅಯ್ಯಯ್ಯೋ! ನೀವೂ ಬಂದರೆ ಚೆನ್ನಾಗಿರುತ್ತದೆಯೆಂದಲ್ಲವೇ ನಾನು ಹೇಳಿದ್ದು" ಎಂದರು ಭಕ್ತವತ್ಸಲಂ.

ಇಷ್ಟರೊಳಗೆ ಶ್ರೀ ಅಣ್ಣಾಮಲೈಪಿಳ್ಳೆಯವರು ಬಂದು, "ನಿಮ್ಮ ಹಾಸಿಗೆ, ಸಾಮಾನುಗಳನ್ನೆಲ್ಲಾ ಎಲ್ಲಿ ಇಟ್ಟಿರುವಿರಿ?" ಎಂದು ಕೇಳಿದರು. "ನಾನೇ ಹೋಗಿ ತಂದುಬಿಡುವೆನು" ಎಂದು ಹೇಳಿ ಅಲ್ಲಿಂದ ಹೊರಟೆ. ಅವರು ಬಿಡ ಲಿಲ್ಲ; ಹಿಂದೆಯೇ ಬಂದರು. "ಇವರಿಗೆ ಹೇಗಪ್ಪಾ ಜವಾಬು ಹೇಳುವುದು" ಎಂದು ಯೋಚನೆ ಮಾಡಿಕೊಂಡು ಹೋಗಿ ನೋಡಿದರೆ, ಹುಣಿಸೇ ಮರದಡಿ ಯಲ್ಲಿ ಹಾಕಿದ್ದ ನನ್ನ ಸಾಮಾನುಗಳೇ ಇಲ್ಲ! ವಿಚಾರಿಸಿದ್ದರಲ್ಲಿ ಶ್ರೀ ಭೂವರಾ ಹ್ಯೆಯಂಗಾರ್ಯರು ಅದನ್ನು ಕ್ವಾರ್ಟೈನಿಗೆ ತೆಗೆದುಕೊಂಡು ಹೋಗಿರುವರೆಂದು ತಿಳಿಯಿತು!

೨೦ ವರ್ಷಗಳ ಹಿಂದೆ ನೋಡಿದ ಅದೇ ಕ್ವಾರ್ಟೈನ್; ಅದೇ ಹುಣಿ ಸೆಯ ಮರಗಳು. ಆದರೆ ಆಗ ಹಗಲು ಕೂಡ ಕೈದಿಗಳ ಕಾಲಿಗೆ ಸರಪಣಿ ಯನ್ನು ತಗಲಿಸಿ ಕೊಠಡಿಗಳಲ್ಲಿ ಕೂಡಿ ಬೀಗ ಹಾಕಿಬಿಡುತ್ತಿದ್ದರು. ಈಗಲೋ, ಸತ್ಯಾಗ್ರಹ ಕೈದಿಗಳು ಅಲ್ಲಲ್ಲೇ ಉಲ್ಲಾಸದಿಂದ ತಿ ರು ಗಾ ಡಿ ಕೊ ೦ ಡೇ ಇರುತ್ತಿದ್ದರು.

ಕ್ವಾರ್ಟೈನಿನಲ್ಲಿ ಎಲ್ಲಾ ಪ್ರತ್ಯೇಕ. ಮುಕ್ಕಾಲು ಭಾಗಕ್ಕೆಲ್ಲಾ ಜನರು ಬಂದುಬಿಟ್ಟಿದ್ದರು. ಎಲ್ಲೋ ಕೆಲವು ಕೊಠಡಿಗಳು ಮಾತ್ರ ಖಾಲಿಯಿದ್ದವು. ಅವುಗಳಲ್ಲಿ ಮೂರು ಕೊಠಡಿಗಳನ್ನು ಶ್ರೀ ಭೂವರಾಹ್ಯೆಯಂಗಾರ್ಯರು ನನಗಾಗಿ ರಿಸರ್ವ್ ಮಾಡಿಬಿಟ್ಟಿದ್ದರು? ಅವುಗಳಲ್ಲಿ ಯಾವುದಾದರೂ ಒಂದನ್ನು ತೆಗೆದು ಕೊಳ್ಳುವಂತೆ ಹೇಳಿದರು.

ಪ್ರಾರಂಭದಲ್ಲಿ ಸಿವಿಲ್ ಜೈಲಿನಿಂದ ಕ್ವಾರ್ಟೈನಿಗೆ ಬರಲು ಎಲ್ಲಾ ಕೈದಿ ಗಳೂ ಆತುರವುಳ್ಳವರಾಗಿದ್ದರೆಂದೂ, ಆದರೆ ಬರಬರುತ್ತಾ ಬಹಳ ಜನರು ಬಂದುಬಿಟ್ಟರೆಂದೂ, ಈಗ ಕೊಠಡಿಗಳಿಗೆ ಗಿರಾಕಿ ಜಾಸ್ತಿಯೆಂದೂ ತಿಳಿಯಿತು. ಸೆರೆಮನೆಯ ಕೊಠಡಿಗಳಲ್ಲಿ ಆರಿಸಿಕೊಳ್ಳಲು ಏನಿದೆ ಎಂದು ಕೇಳಬಹುದು. ಗಾಳಿಯೇ ಬರದ ಕೊಠಡಿಗಳು, ಗಾಳಿ ಸಂಚಾರವಿರುವ ಕೊಠಡಿಗಳು, ಬೆಳಗಿನ ಹೊತ್ತು ಬಿಸಿಲು ಕಾಯುವ ಕೊಠಡಿಗಳು, ಮಧ್ಯಾಹ್ನ ಬಿಸಿಲಿನ ತಾಪವನ್ನುಂಟು ಮಾಡುವ ಕೊಠಡಿಗಳು ಹೀಗೆ ಕೆಲ ವಿಧವಾಗಿರುವುವು. ಮೊದಲು ಬಂದವರು ಇದನ್ನೆಲ್ಲಾ ಗಮನಿಸಿ ಆರಿಸಿಕೊಂಡಿದ್ದರು; ನಾನೂ ಒಂದನ್ನು ಆರಿಸಿಕೊಂಡೆ.

ಅದು ೬ ನೇ ನಂಬರ್ ಕೊಠಡಿ. ನನಗೆ ಎದುರು ಸಾಲಿನಲ್ಲಿ ಶ್ರೀ ಕೆ. ಸಂತಾನಮ್, ಶ್ರೀ ಭೂವರಾಹೈಯಂಗಾರ್, ಡಾ|| ಶ್ರೀನಿವಾಸರ್, ಜನಾಬ್ ಅಬ್ದುಲ್ ಸತ್ತಾರ್ ಇವರೆಲ್ಲಾ ಇದ್ದರು. ಪಕ್ಕದಲ್ಲಿ ಶ್ರೀ ದಿಂಡಿಗಲ್ ಗಣೇಶ್ ಇದ್ದರು. ಕೊಂಚ ದೂರದಲ್ಲಿ ಶ್ರೀ ಅವಿನಾಶಿಲಿಂಗಮ್, ಶ್ರೀ ವೇದರತ್ನಂ, ಶ್ರೀ ಕೃಷ್ಣ ಸ್ವಾಮಿ ಭಾರತಿ, ಶ್ರೀ ದೊರಸ್ವಾಮಿ ನಾಯ್ಡು ಇವರು ಇದ್ದರು.

ಇವರನ್ನೆಲ್ಲಾ ಒಂದು ಸುತ್ತು ಮಾತನಾಡಿಸಿಬಿಟ್ಟು ಬರುವವೇಳೆಗೆ ಸಾಯಂಕಾಲವಾಗಿಬಿಟ್ಟಿತು. 'ಠಣ್ ಠಣ್' ಎಂದು ಘಂಟೆ ಹೊಡೆಯಿತು. ಅದು ಸಂಜೆ ಊಟದ ಘಂಟೆಯೆಂದು ತಿಳಿದುಕೊಂಡೆ. ಎಲ್ಲರೂ ಕೈಯಲ್ಲಿ ತಟ್ಟೆ ಚೊಂಬುಗಳನ್ನು ಹಿಡಿದುಕೊಂಡು ಹೊರಟರು ನಾನೂ ಹೊರಟೆ. ಸಂಜೆ ಊಟಕ್ಕೆ ಮಧ್ಯಾಹ್ನ ಕುಳಿತಿದ್ದ ಜಾಗದಲ್ಲಿ ಕುಳಿತುಕೊಳ್ಳಲಿಲ್ಲ. ಈಗ ಬಿಸಿಲಿಲ್ಲವಾದ್ದರಿಂದ ಊಟದ ಮನೆಯ ಹತ್ತಿರವಿದ್ದ ಅಂಗಳದಲ್ಲಿ ಎಲ್ಲರೂ ಸುತ್ತುಗಟ್ಟಿ ಕುಳಿತುಕೊಂಡೆವು. ಬಡಿಸುವ ಕೆಲಸವನ್ನು ವಹಿಸಿಕೊಂಡಿರುವವರಲ್ಲಿ ಕೆಲವರು ಎರಡು ಹೊತ್ತೂ ಆ ಕೆಲಸ ಮಾಡುವರು. ಕೆಲವರು ಬೆಳಿಗ್ಗೆ ಅಥವಾ ಸಾಯಂಕಾಲ ಮಾತ್ರ ಮಾಡುವರು. ಸಾಯಂಕಾಲ ಬಡಿಸಿದವರಲ್ಲಿ ಮಾಜಿ ಮಂತ್ರಿ ಶ್ರೀ ವಿ. ವಿ. ಗಿರಿಯೂ, ಸೆಂಟ್ರಲ್ ಎಂ. ಎಲ್. ಎ. ಗಳಾದ ಅವಿನಾಶಲಿಂಗಮ್, ಶ್ರೀ ಸಂತಾನಮ್ ಇವರೂ ಕಾಣಬಂದರು. ಮೊದಲು ಹೇಳಿದ ಇಬ್ಬರೂ ಇಂಡಿಯಾ ಶಾಸನ ಸಭೆಯಲ್ಲಿ ಸರ್ಕಾರದವರೊಡನೆ ಮಾತುಗಳನ್ನು ಬಡಿಸಿ ಅಭ್ಯಾಸವಾಗಿದ್ದುದರಿಂದಲೇ, ಇಲ್ಲಿ ಊಟವನ್ನು ಬಡಿಸುವುದಕ್ಕೆ ಅಷ್ಟು ತಕ್ಕವರಾಗಿ ಕಾಣಿಸಲಿಲ್ಲ. ಶ್ರೀ ಅವಿನಾಶಲಿಂಗಮ್‌ರವರು ಪಲ್ಯವನ್ನೋ, ಚಟ್ನಿಯನ್ನೋ ತೆಗೆದುಕೊಂಡು, ಒಂದು ಸುತ್ತು ಬರುವುದರೊಳಗೆ ಅರ್ಧ ಜನ ಊಟಮಾಡಿ ಎದ್ದು ಹೊರಟುಹೋಗಿದ್ದರು! ಶ್ರೀ ಕೆ. ಸಂತಾನಮ್ ಗೋಧಿ ತಿನ್ನುವವರಿಗಾಗಿ ರೊಟ್ಟಿ ತಂದು ಬಡಿಸಿದರು. ಅವರು ಯಾವುದೋ ಜ್ಞಾನದಲ್ಲಿ ಬಡಿಸುತ್ತಿದ್ದವರಂತೆ ಕಂಡಿದ್ದರಿಂದ ನಾನು ಮುಂಜಾಗ್ರತೆಯಿಂದ ತಟ್ಟೆಯನ್ನು ಮೇಲಕ್ಕೆತ್ತಿಬಿಟ್ಟೆ. ಅವರ ಮೊಣಕೈ ನಾನು ಎತ್ತಿಹಿಡಿದ ತಟ್ಟೆಯ ಒಂದು ಭಾಗಕ್ಕೆ ತಗಲಿತು. ತಟ್ಟೆಯನ್ನು ಒಂದು ಕೈಲಿ ತೆಗೆದುಕೊಂಡು ರೊಟ್ಟಿಯನ್ನು ಹಾಕಿಯೇ ಬಿಟ್ಟರು.

ಅರ್ಧ ಊಟಮಾಡುತ್ತಿರುವಾಗ ದೊಡ್ಡದಾಗಿ ಗಾಳಿ ಬೀಸಲಾರಂಭಿಸಿ ಬಿಟ್ಟಿತು. 'ಅಯ್ಯಯ್ಯೋ ! ಥೂ ಥೂ !' ಎಂಬ ಉದ್ಗಾರಗಳೊಡನೆ ಎಲ್ಲರೂ ಅವರವರ ತಟ್ಟೆಗಳನ್ನು ಕೈಲೆತ್ತಿಕೊಂಡರು. ಆದರೆ ಆ ವೇಳೆಗೆ ಬೇಕಾದಷ್ಟು ಮಣ್ಣೂ, ಧೂಳೂ ತಟ್ಟೆಯೊಳಗೆ ತುಂಬಿಬಿಟ್ಟಿತ್ತು!

"ಈಗಲೇ ಹೀಗಾಯಿತಲ್ಲಾ? ಮೇಲ್ಗಾಳಿ ನಾಳೆ ಬಳಿಗ್ಗೆ ಬೀಸಿದರೆ ಹೇಗೆ ತಾನೆ ಆ ಮರದಡಿಯಲ್ಲಿ ಕುಳಿತು ಊಟಮಾಡುತ್ತೇವೋ, ತಿಳಿಯಲಿಲ್ಲ" ಎಂದರು ಒಬ್ಬ ಮಿತ್ರರು.

"ಭಾರತಿಯವರು ಕೆಳಗೆ ಬಿದ್ದಾಗ ಹೇಳಿದ್ದನ್ನು ಜ್ಞಾಪಿಸಿಕೊಂಡರೆ ಸರಿ ಹೋಗುವುದು" ಎಂದೆ.

"ಅದೇನು ಸಮಾಚಾರ?" ಎಂದು ಅವರು ಕುತೂಹಲಭರಿತರಾಗಿ ಕೇಳಿದರು.

ಭಾರತಿಯವರು ಒಂದು ದಿನ ರೈಲ್ವೆ ಸ್ಟೇಷನ್ನಿಗೆ ರೈಲು ಹತ್ತುವುದಕ್ಕಾಗಿ ಬಂದರು. ಹಿಂದೆಯೇ ಮಿತ್ರರೂ ಕೆಲವರು ಬಂದಿದ್ದರು. ರೈಲು ಹತ್ತುವುದಕ್ಕೆ ಹೋದಾಗ ಭಾರತಿಯವರಿಗೆ ಕಾಲು ತಪ್ಪಿತು. ಕೆಳಗೆ ಬಿದ್ದುಬಿಟ್ಟರು. ಮಿತ್ರರು ತಕ್ಷಣ ಹೋಗಿ ಅವರನ್ನು ಮೇಲಕ್ಕೆತ್ತಲೆತ್ನಿಸಿದರು. ಆದಕ್ಕೆ ಭಾರತಿಯವರು, "ಬೇಡ ! ನನ್ನನ್ನು ಮೇಲೆತ್ತಬೇಡಿ ! ಈ ಪುಣ್ಯ ಭಾರತ ಭೂಮಿಯ ಮಣ್ಣಿನಲ್ಲಿ ಇನ್ನೂ ಸ್ವಲ್ಪ ಹೊತ್ತು ಬಿದ್ದಿರುವೆನು ; ನನ್ನನ್ನು ಹೆತ್ತು ಸಾಕಿದ ಭೂಮಿ ! ಹಿರಿಯರು ಬೆಳೆದ ಭೂಮಿ" ಎಂದು ಹೇಳಿ ಹಾಗೆಯೇ ಬಿದ್ದಿದ್ದರು. ಮಿತ್ರರು "ವಾಸ್ತವವೇ. ಆದರೆ ಈಗ ರೈಲು ನಿಮ್ಮನ್ನು ಕಾಯದೆ ಹೊರಟು ಹೋಗುವುದಲ್ಲಾ! ಈ ಪರಿಶುದ್ಧ ಭೂಮಿಯಲ್ಲಿ ಬಿದ್ದು ಹೊರಳುವುದನ್ನು ಇನ್ನೊಂದು ಸಮಯದಲ್ಲಿ ಸಾವಕಾಶವಾಗಿ ಮಾಡಬಹುದಲ್ಲಾ" ಎಂದು ಹೇಳಿ ಅವರನ್ನು ಬಲಾತ್ಕಾರವಾಗಿ ರೈಲು ಹತ್ತಿಸಿದರಂತೆ.

ಈ ಸಮಾಚಾರವನ್ನು ನಾನು ಹೇಳಿ, "ಅಂತಹ ದೇಶಭಕ್ತರು ಹುಟ್ಟಿದ ತಮಿಳುನಾಡಿನಲ್ಲೇ ನಾವೂ ಹುಟ್ಟಿರುವೆವು ; ದೇಶಭಕ್ತಿ ಉಕ್ಕಿ ಹರಿದಿದ್ದರಿಂದ

ಕಾನೇ ಸೆರೆಮನೆಗೂ ಬಂದಿರುವೆವು ? ಮತ್ತೆ ಈ ಪುಣ್ಯ ಭೂಮಿಯ ಮಣ್ಣನ್ನು ಸ್ವಲ್ಪ ತಿನ್ನಲು ಏಕೆ ಹಿಂಜರಿಯಬೇಕು ? " ಎಂದು ಕೇಳಿದೆ.

ಊಟವಾದನಂತರ ರಾಜಾಜಿಯ ಹತ್ತಿರ ಪುನಃ ಹೋದೆ. "ಕ್ವಾರ್ಟೈನಿನಲ್ಲಿ ಜಾಗ ಮಾಡಿಕೊಂಡೆ ; ಬಹಳ ಸುಖವಾಗಿದೆ " ಎಂದೆ. "ಬೆಳಗ್ಗಿನ ಹೊತ್ತು ವಾಲ್ಮೀಕಿ ರಾಮಾಯಣವನ್ನೋದುವೆವು ; ಅದಕ್ಕೆ ಬಂದುಬಿಡು" ಎಂದರು. ಮತ್ತೆ ನನ್ನ ದೇಹಾರೋಗ್ಯದ ವಿಚಾರವಾಗಿ ಪ್ರಶ್ನಿಸಿದರು. "ಆಸ್ತಮಾ ತೊಂದರೆ ಬಹಳವಾಗಿತ್ತು ಎಂದು ಕೇಳಿದೆ ; ಈಗ ಹೇಗಿದೆ ?" ಎಂದರು.

" ದೇವರ ಕೃಪೆ, ಸ್ವಲ್ಪ ಕಡಿಮೆಯಾಗಿದೆ. ಆದರೆ ರಾತ್ರಿ ವೇಳೆ ದಾಹ ವಾದರೆ ಕುಡಿಯಲು ಸ್ವಲ್ಪ ಬಿಸಿನೀರು ಬೇಕಾಗುತ್ತದೆ ; ತಣ್ಣೀರು ಕುಡಿದರೆ ಕೆಮ್ಮಲು ಹೆಚ್ಚಾಗಿಬಿಡುತ್ತದೆ. ಕೈಯಲ್ಲಿ ಒಂದು 'ಥರ್‌ಮಾಸ್‌ಫ್ಲಾಸ್ಕ್' ತಂದಿದ್ದೆ. ಅದನ್ನು ಕೊಡುವುದಿಲ್ಲವೆಂದು ಜೈಲು ಅಧಿಕಾರಿಗಳು ತೆಗೆದಿಟ್ಟು ಕೊಂಡುಬಿಟ್ಟರು. ಅದನ್ನು ಕೊಡುವುದರಿಂದ ಇವರಿಗಾಗುವ ನಷ್ಟವೇನೋ ತಿಳಿಯಲಿಲ್ಲ" ಎಂದು ಹೇಳಿಕೊಂಡೆ.

" ಜೈಲಿನೊಳಕ್ಕೆ ಬಂದಮೇಲೆ ನ್ಯಾಯಾನ್ಯಾಯವನ್ನು ವಿಮರ್ಶಿಸಲು ಸಾಧ್ಯವೇ ? ತುಪ್ಪವನ್ನು ಕೊಡಬಹುದು ; ಆದರೆ ಕೊಬ್ಬರಿಯೆಣ್ಣೆಯನ್ನು ಕೊಡಲಾರೆವೆನ್ನುತ್ತಾರೆ ! ಮೈಗೆ ಸೋಪ್ ತೆಗೆದುಕೊಳ್ಳಬಹುದು ; ಆದರೆ ಬಟ್ಟೆಗೆ ಕೂಡದು ! ಹೀಗೆಯೇ ಎಷ್ಟೋ ಅರ್ಥವಿಲ್ಲದ ವಿಷಯಗಳು " ಎಂದು ಹೇಳಿ, " ನನ್ನ ಹತ್ತಿರ ಒಂದು ಫ್ಲಾಸ್ಕ್ ಇದೆ. ಅದು ನನಗೆ ಬೇಕಾಗಿಲ್ಲ. ನೀನು ತೆಗೆದುಕೊಂಡು ಹೋಗು ಬಿಸಿನೀರು ಕೂಡ ಸಿದ್ಧವಾಗಿದೆ" ಎಂದು ಹೇಳಿಕೊಟ್ಟರು. ನಾನು, " ಬೇಡ ; ಹೇಗಾದರೂ ಆಗುತ್ತದೆ " ಎಂದು ಹೇಳಿದರೂ ಕೇಳಲಿಲ್ಲ.

ಅಂದಿನಿಂದ ಪ್ರತಿದಿನವೂ ಬೆಳಿಗ್ಗೆ ಫ್ಲಾಸ್ಕನ್ನು ರಾಜಾಜಿಯ ಬ್ಲಾಕಿನಲ್ಲಿ ಇಟ್ಟುಬಿಡುತ್ತಿದ್ದೆ. ಸಾಯಂಕಾಲದ ಹೊತ್ತಿಗೆ ಅದರಲ್ಲಿ ಬಿಸಿನೀರು ತುಂಬಿ ಸಿದ್ಧವಾಗಿರುತ್ತಿತ್ತು. ರಾತ್ರಿ ಊಟವಾದನಂತರ ಅದನ್ನು ತಂದುಕೊಳ್ಳುತ್ತಿದ್ದೆ.

ಒಂದೊಂದು ದಿನ ಅಕಸ್ಮಾತ್ ಫ್ಲಾಸ್ಕನ್ನು ಮರೆತುಬಿಟ್ಟರೆ, ಫ್ಲಾಸ್ಕೇ ನನ್ನನ್ನು ಹುಡಿಕಿಕೊಂಡು ಬಂದುಬಿಡುತ್ತಿತ್ತು! ರಾಜಾಜಿಯಾಗಲೀ, ಮುನಿಸ್ವಾಮಿಪಿಳ್ಳೆಯಾಗಲೀ, ಅದನ್ನು ಯಾರ ಕೈಲಾದರೂ ಕೊಟ್ಟು ಕಳುಹಿಸಿಬಿಡುತ್ತಿದ್ದರು!

## ೮. ರಾಜಾಜಿಯವರೂ, ರಾಮಾಯಣವೂ

ಮಾರನೇ ಬೆಳಿಗ್ಗೆ ಸ್ವಲ್ಪ ಕುತೂಹಲದಿಂದಲೇ ಎಚ್ಚೆತ್ತೆ. "ಎಂಟು ಘಂಟೆಗೆ ವಾಲ್ಮೀಕಿ ರಾಮಾಯಣವನ್ನು ಕೇಳಲು ಹೋಗಬೇಕು" ಎಂಬುದೇ ಈ ಕುತೂಹಲಕ್ಕೆ ಕಾರಣ. ಮೊದಲನೆ ದಿನ ಅಂತಹ ಆತುರವಿದ್ದಿದ್ದು ಆಶ್ಚರ್ಯವೇನೂ ಇಲ್ಲ. ಆದರೆ ಪ್ರತಿಯೊಂದು ದಿನವೂ ಅದೇ ಆತುರ! ೮೨ ದಿನಗಳ ನಂತರ ಬಿಡುಗಡೆಯಾದ ಬೆಳಿಗ್ಗೆ ಸಹ, "ಇವತ್ತೂ ಇಂದ್ರಜಿತು ಪ್ರಕರಣ! ಕೇಳಿಬಿಟ್ಟು ಹೋಗೋಣ" ಎಂಬಂತಿತ್ತು.

ಇದನ್ನು ನೆನೆದಾಗಲೆಲ್ಲಾ ನನಗೊಂದು ವಿಧವಾದ ಆಶ್ಚರ್ಯವಾಗುತ್ತದೆ. ಎಷ್ಟೋ ಸಾವಿರ ವರ್ಷಗಳ ಹಿಂದೆ ಮಾನವವರ್ಗವು ನಾಗರಿಕತೆಯಲ್ಲಿ ತೀರ ಕೀಳಾಗಿದ್ದಂತಹ ಕಾಲದಲ್ಲಿ, ಕಾಡಿನಲ್ಲಿ ವಾಸಿಸುತ್ತಿದ್ದ ಋಷಿಯೋರ್ವನು ರಚಿಸಿದ ಕಾವ್ಯ, ಅದು. ಅದನ್ನು ನೂರಾರು ಸಲ ಕೇಳಿದ್ದಾಯಿತು; ನೂರಾರು ಸಲ ಓದಿದ್ದಾಯಿತು. ಆದರೂ ಅದು ಇವತ್ತಿಗೂ ರಸಭರಿತವಾದ ಗ್ರಂಥವೇ ಆಗಿದೆ! ಓದಲು ಉತ್ಸಾಹವಾಗುತ್ತಗೆ! ಇದೆಂತಹ ಅಮೋಘವಾದ ಕಥೆ! ಎಂತಹ ಅದ್ಭುತ ಕಾವ್ಯ!

ರಾಮಾಯಣದ ಮಹಿಮೆ ಹಾಗಿರಲಿ. ಸೆರೆಯಲ್ಲಿ ರಾಜಾಜಿಯವರೊಂದಿಗೆ ಕಲೆತು ಅದನ್ನು ಓದಿ ಅನುಭವಿಸಿದ ಅನುಪಮ ಆನಂದವೇ ಬೇರೆ.

ಮಿತ್ರರಾದ ಟಿ. ಕೆ. ಸಿ. ಯವರು ಆಗಾಗ ಹೇಳುವರು—"ರಾಮಾಯಣವನ್ನು ಓದಲು ಮೊದಲುಮಾಡಿದೆನೆಂದರೆ, ರಾಮನೆಂಬ ಹೆಸರು ಬಂದೊಡನೆಯೇ ರಾಜಾಜಿಯವರ ಮೂರ್ತಿಯು ಕಣ್ಣೆದುರಿನಲ್ಲಿ ನಿಲ್ಲುವುದು" ಎಂದು.

ಹೀಗಿರುವಲ್ಲಿ ರಾಜಾಜಿಯವರೇ ರಾಮಾಯಣವನ್ನೂ ಓದಿ, ಅರ್ಥವನ್ನೂ ಹೇಳುವುದೆಂದರೆ, ಅದನ್ನು ಕೇಳಲು ತಿರುಚನಾಪಳ್ಳಿಯ ಸೆರೆಮನೆಗೇ ಏಕೆ,

ಅಂಡಮಾನಿಗೆ ಕೂಡ ಹೋಗಬಹುದಲ್ಲ! ಸಾಧಾರಣವಾಗಿ ಯಾವ ಕಲೆಯನ್ನೂ ಏಕಾಂತದಲ್ಲಿ ಅನುಭವಿಸುವುದಕ್ಕಿಂತ ನಾಲ್ಕು ಜನರೊಡನಿದ್ದು ಸವಿದರೆ ಹೆಚ್ಚು ಆನಂದವಾಗುತ್ತದೆ. ಸಂಗೀತವನ್ನು ರೇಡಿಯೋ ಮೂಲಕ ಕೇಳುತ್ತೇವೆ. ಆದರೆ ಸಭೆಯಲ್ಲಿ ಕುಳಿತು, "ಶಹಬ್ಬಾಸ್" ಎಂದು ಪಕ್ಕದಲ್ಲಿರುವವನ ತೊಡೆಯ ಮೇಲೆ ತಟ್ಟಿ, ನಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಆನಂದಪಟ್ಟಂತಿರುವುದೆ? ಚಿತ್ರಕಲೆ ಮತ್ತು ಶಿಲ್ಪಕಲೆಗಳೂ ಇದೇ ತರಹವೆ. ಕಲೆ ಯಾವುದೇ ಇರಲಿ ನಾಲ್ಕು ಜನರೊಡನೆ ಕಲೆತು ಅನುಭವಿಸುವುದೆಂದರೆ ಸ್ವಾರಸ್ಯ ಜಾಸ್ತಿಯೆ. ಒಬ್ಬರೆಂದರೆ ಎರಡೇ ಕಣ್ಣುಗಳು. ನಾಲ್ವರೆಂದರೆ ಒಬ್ಬೊಬ್ಬರೂ ಎಂಟು ಕಣ್ಣುಗಳಿಂದ ನೋಡಬಹುದಲ್ಲವೆ?

ಈ ರೀತಿಯ ಗುಂಪೊಂದು ಕವಿತಾನುಭವಕ್ಕೆ ಅತ್ಯಾವಶ್ಯಕ. "ಆಹಾ! ಇಲ್ಲಿ ಕವಿಯು ಎಷ್ಟು ಚೆನ್ನಾಗಿ ಹೇಳಿರುತ್ತಾನೆ!" ಎಂದು ನಾಲ್ವರೊಡನೆ ಹೇಳುವದರಲ್ಲಿ ಉಂಟಾಗುವಂತಹ ಪೂರ್ಣ ಸಂತೋಷವು ಒಬ್ಬನೇ ಓದಿಕೊಳ್ಳುವುದರಲ್ಲಿಲ್ಲ.

ತಿರುಚನಾಪಳ್ಳಿ ಸೆರೆಯಲ್ಲಿನ ಈ ನಿಬಂಧನೆಯು (ನಾಲ್ವರನ್ನು ಒಟ್ಟಿಗಿರಿಸುವುದು) ರಾಮಾಯಣ ಪಠನಕ್ಕೆ ಬಹಳ ಸಹಾಯವಾಗಿತ್ತು. ಸಾಧಾರಣವಾಗಿ ಹದಿನೈದು ಜನ ಹಾಜರಿರುತ್ತಿದ್ದರು. ಇದರಲ್ಲಿ ಶ್ರೀಗಳಾದ ಎ. ಎಸ್. ವರದಾಚಾರಿ, ಕೆ. ಸಂತಾನಮ್, ಮಲ್ಲಿಕಾರ್ಜುನುಡು, ಅನಂತಶಯನಮ್, ಚಿತ್ತೂರು ವರದಾಚಾರಿಯವರೇ ಮುಂತಾದವರು ಸಂಸ್ಕೃತದಲ್ಲಿ ಒಳ್ಳೆಯ ಪರಿಶ್ರಮವುಳ್ಳವರು. "ಪಂಡಿತರು" ಎಂದೇ ಹೇಳಬಹುದು. ಇನ್ನು ಹಲವರು ಸ್ವಲ್ಪ ಅರಿತವರು. ಶ್ರೀಗಳಾದ ವೇದರತ್ನಂ, ಕೃಷ್ಣಸ್ವಾಮಿ ಭಾರತಿ, ಪಿ. ರಾಮ ರೆಡ್ಡಿಯಂತಹವರು ಕೆಲವರು ಸಂಸ್ಕೃತವನ್ನೇ ಅರಿಯದವರು. ಆದರೆ ಅವರೂ ಸಹ ಅಂತಹವರಷ್ಟೇ ಆನಂದವನ್ನನುಭವಿಸಿದರು. ಇದಕ್ಕೆ ಕಾರಣ, ಇಂಥವರೂ ಉಂಟೆಂಬುದನ್ನು ಗಮನದಲ್ಲಿಟ್ಟು ರಾಮಾಯಣವನ್ನೋದಿದ ರಾಜಾಜಿಯವರೇ.

ನಾನು ಹೋದಾಗ ರಾಮಾಯಣದಲ್ಲಿ ಶ್ರೀರಾಮನು ವನವಾಸಕ್ಕೆ ಹೊರಟ ಸಮಯ. ಮೊದಲು ಕೆಲವು ದಿನಗಳು ರಾಜಾಜಿಯವರೇ ಸಂಸ್ಕೃತ ಶ್ಲೋಕ

ಗಳನ್ನೂ ಓದಿ ಅರ್ಥವನ್ನೂ ಹೇಳುತ್ತಿದ್ದರು. ಮಿಕ್ಕವರು ಪುಸ್ತಕವನ್ನಿಟ್ಟು ಕೊಂಡು ನೋಡುವರು. ನಡುನಡುವೆ ಅರ್ಥದ ಅಥವಾ ಕಥಾ ವಸ್ತುವಿನ ವಿಷಯವಾಗಿ ತರ್ಕಗಳು ನಡೆಯುವವು. ಕುತರ್ಕಗಳೂ ನಡೆದದ್ದುಂಟು.

ಪಠನ ಸಾಧಾರಣವಾಗಿ ಎರಡು ಘಂಟೆಗಳ ಕಾಲ ನಡೆಯುವುದು. ಇದು ರಾಜಾಜಿಯವರಿಗೆ ಶ್ರಮಕರವೆಂದು ತಿಳಿಯಬಂತು. ಶ್ರೀ ಮುನಿಸ್ವಾಮಿ ಪಿಳ್ಳೆ ಯವರಿಗೆ ಯೋಚನೆಗಿಟ್ಟಿತು. "ರಾಜಾಜಿಯವರು ತಮಗೆ ಬಹಳ ಶ್ರಮ ವನ್ನುಂಟುಮಾಡಿಕೊಳ್ಳುತ್ತಾರೆ"ಂದು ಆಗಾಗ ಹೇಳುವರು. ರಾಜಾಜಿಯವರಿಗೆ ಒಂದುದಿನ ಗಂಟಲಿನ ಬಾಧೆ ಬಲವಾಗಿತ್ತು. ಆ ದಿನ ಅವರಿಗೆ ಓದಲಾಗಲಿಲ್ಲ. ಅವರ ಬದಲು ಶ್ರೀ ಎ. ಎಸ್. ವರದಾಚಾರಿಯವರು ಓದಿದರು. ಸಾಯಂ ಕಾಲದಲ್ಲಿ ನಾನು ರಾಜಾಜಿಯವರೊಂದಿಗೆ, "ವರದಾಚಾರಿಯವರು ಬಹಳ ಚೆನ್ನಾಗಿ ಓದುತ್ತಾರೆ. ಧ್ವನಿಯೂ ಇಂಪಾಗಿವೆ ದಿನವೂ ಅವರೇ ಓದ ಬಹುದಲ್ಲ?" ಎಂದೆ. ಅವರೂ, 'ಸರಿ' ಎಂದೊಪ್ಪಿಬಿಟ್ಟರು. ಶ್ರೀ ಮುನಿ ಸ್ವಾಮಿ ಪಿಳ್ಳೆಯವರು "ಬಹಳ ಒಳ್ಳೆಯ ಕೆಲಸ ಮಾಡಿದಿರಿ" ಎಂದರು.

ಮಾರನೇ ದಿನದಿಂದ ಶ್ರೀ ಎ. ಎಸ್. ವರದಾಚಾರಿಯವರು ಓದಿದರು. ಇದು ಬಹಳ ಅನುಕೂಲವಾಯಿತು. ಏಕೆಂದರೆ, ಸಂಸ್ಕೃತವನ್ನರಿಯದವರಿಗೆ ವಿವರಿಸಿ ಹೇಳಲು ರಾಜಾಜಿಯವರಿಗೆ ಸಮಯ ದೊರಕಿದಂತಾಯಿತು. 'ಪಂಡಿತ'ರ ತರ್ಕಕುತರ್ಕಗಳ ತೀರ್ಮಾನವೂ ಸುಲಭವಾಯಿತು. ಇಷ್ಟೇ ಅಲ್ಲದೆ ಅವರ ಹಾಸ್ಯಪೂರಿತ ಚತುರೋಕ್ತಿಗಳು ಹೆಚ್ಚು ಪ್ರಕಾಶಕ್ಕೆ ಬರಲು ಅವಕಾಶವುಂಟಾಯಿತು.

ರಾಜಾಜಿಯವರ ಸರಸ ಸ್ವಭಾವವನ್ನು ಎತ್ತಿ ತೋರಿಸುವಂತಹ ಸಂದರ್ಭ ಗಳೆರಡನ್ನು ಇಲ್ಲಿ ಕೊಡುತ್ತೇನೆ—

೧. ಶ್ರೀ ಅನಂತಶಯನಮ್ ಅಯ್ಯಂಗಾರ್ ದೊಡ್ಡ ಪಂಡಿತರು. ಬಹಳ ಓದಿದವರು. ಆದರೆ ಮಾತಿಗೆ ಮೊದಲುಮಾಡಿದರೆಂದರೆ ಮಾತ್ರ ನಿಲ್ಲಿ ಸಲು ಅವರಿಂದಾಗದು. "ರಾಮಾನುಜ ಭಾಷ್ಯದಲ್ಲಿ ಹೇಳಲ್ಪಟ್ಟಿದೆ" ಎಂದು ಆರಂಭಿಸಿ ಹಿಟ್ಲರಿನ "ಮೈನ್ ಕ್ಯಾಂಫ್"ವರೆಗೂ ಬಂದುಬಿಡುವರು. ಒಂದು

ದಿನ "ಶತ್ರುಘ್ನನಿಗೆ ಶತ್ರುಘ್ನನೆಂದು ಹೆಸರೇಕೆ ಬಂತು ? ಅವನು ಶತ್ರುವನ್ನೊಬ್ಬನನ್ನಾದರೂ ಜಯಿಸಲಿಲ್ಲವಲ್ಲ" ಎಂದು ಪ್ರಶ್ನೆ ಹುಟ್ಟಿತು. "ಶತ್ರು ಎಂದರೆ ಹೊರಗಿನ ಶತ್ರು ಮಾತ್ರವೆ? ಒಳಗಿನ ಶತ್ರುಗಳನ್ನು ಜಯಿಸಿದವನವನು, ಮಹಾಜ್ಞಾನಿ" ಎಂದರು ಶ್ರೀ ವರದಾಚಾರಿಯವರು. ಇದಕ್ಕೆ ಅನೇಕರು ಸಮ್ಮತಿಸಲಿಲ್ಲ. ''ಒಳಗಿನ ಶತ್ರುಗಳನ್ನು ಜಯಿಸಿದಂಥವನಾದರೆ ಗೂನಿಯ (ಮಂಥರೆ) ಮೇಲೇಕವನು ಉರಿದುಬಿದ್ದದ್ದು?" ಎಂದು ತರ್ಕಕ್ಕೆ ಆರಂಭಿಸಿದರು. ಆಗ ಶ್ರೀ ಅನಂತಶಯನಮ್‌ರವರು, "ಅರ್ಥವಿಲ್ಲದ ಹೆಸರುಗಳನ್ನಿಡುವುದು" ಎಂಬುದನ್ನು ಕುರಿತು ಮಾತನಾಡಲುಪಕ್ರಮಿಸಿದರು. ನಿಲ್ಲಿಸುವಂತೆಯೇ ತೋರಲಿಲ್ಲ. ಆಗ ರಾಜಾಜಿಯವರು, "ಅರ್ಥವಿಲ್ಲದೆ ಹೆಸರಿಡುವುದು ಎಂಬುದಕ್ಕೆ ಒಂದು ಉದಾಹರಣೆ—ಹಾವನ್ನು ಕಂಡು ಅತಿ ಭಯಪಟ್ಟು ಹತ್ತು ಮೈಲಿಗಳ ದೂರ ಓಡುವವನಿಗೆ ಅನಂತಶಯನಮ್ ಎಂದು ಹೆಸರಿಡುವುದು" ಎಂದರು. ಅದಕ್ಕೆ ಹಿಂದಿನ ದಿನ ತಾನೆ ಜೈಲಿನಲ್ಲಿ ಹಾವೊಂದು ಬಂದಿತ್ತು. ಅದರಿಂದ ರಾಜಾಜಿಯವರ ಮಾತನ್ನು ಕೇಳಿದೊಡನೆಯೇ ಎಲ್ಲರೂ ಒಂದಾಗಿ ನಗಲಾರಂಭಿಸಿದರು. ಅವತ್ತು ರಾಮಾಯಣವನ್ನು ಅಲ್ಲಿಗೆ ನಿಲ್ಲಿಸಬೇಕಾಯಿತು.

೨. ಚಿತ್ರಕೂಟದಲ್ಲಿ ಭರತನು ರಾಮನನ್ನು ಬರುವಂತೆ ಬಹಳ ಒತ್ತಾಯಪಡಿಸುತ್ತಾನೆ. ಆದರೆ ರಾಮನು ಒಪ್ಪುವುದಿಲ್ಲ. ''ರಾಮನಿಗೇಕೆ ಇಷ್ಟು ಹಟ? ಶಿವನೇ ಎಂದು ಭರತನೊಡನೆ ಹೋಗಿದ್ದರೆ ಎಷ್ಟು ಕಷ್ಟಗಳು ತಪ್ಪುತ್ತಿದ್ದವು!'' ಎಂದೊಬ್ಬರು ಪರಿತಾಪಪಟ್ಟರು.

''ಅದಕ್ಕೇನು ಮಾಡುವುದು? ಸೀತೆಯ ವಿಧಿ'' ಎಂದು ಇನ್ನೊಬ್ಬರು ಹೇಳಿದರು.

''ರಾವಣನ ತಲೆಗಳ ವಿಧಿ ಎನ್ನಿ'' ಎಂದು ರಾಜಾಜಿಯವರು ಒಡನೆಯೇ ತಿದ್ದಿದರು.

ಇದನ್ನು ಬರೆಯುವಾಗಲೇ ನನಗೆ ನಗು ಬರುತ್ತೆ! ಎಂದಮೇಲೆ ಎಲ್ಲರೂ ಸೇರಿ ಎಷ್ಟು ಜೋರಾಗಿ ನಕ್ಕಿರಬಹುದು ಎಂಬುದನ್ನು ವಾಚಕರೇ ಊಹಿಸಿಕೊಳ್ಳಬಹುದು.

# ೯. ಪ್ರಕಾಶಂರವರೂ ವಿದ್ಯುಚ್ಛಕ್ತಿಯೂ

ತಿರುಚನಾಪಳ್ಳಿಯ ಸೆರೆಯಲ್ಲಿನ ದೃಶ್ಯಗಳು ಹಲವು ಹಾಗೆಯೇ ನನ್ನ ಮನಸ್ಸಿನಲ್ಲಿ ನೆಲೆಸಿವೆ.

ಕ್ವಾರ್ಟೈಸಿನಲ್ಲಿ ನಾವಿದ್ದ ಭಾಗಕ್ಕೆ ಉತ್ತರದಲ್ಲಿ ಮನೋಹರವಾದ ದೃಶ್ಯವೊಂದನ್ನು ಬೆಳಗ್ಗೆ ಎಂಟು ಘಂಟೆಗೆ ಕಾಣಬಹುದು. "ಹುಣಿಸೆಯ ಮರವೇ ಜೈಲಿನ ಹೆಗ್ಗುರುತು" ಎಂಬ ನಾಣ್ಣುಡಿಗೆ ವಿರೋಧವಾಗಿ ಅಲ್ಲೆರಡು ಬೇವಿನ ಮರಗಳಿವೆ. ಈ ಮರಗಳ ನೆರಳಿನಲ್ಲಿ ಹಾಸಿದ ಚಾಪೆಯ ಮೇಲೆ ಸುಮಾರು ಹತ್ತು-ಹದಿನೈದು ಜನ ಕುಳಿತುಕೊಂಡು ನೂಲುವರು. ಒಬ್ಬರು ಯಾವುದೋಒಂದು ಹಳೆಯಪುಸ್ತಕವನ್ನಿಟ್ಟುಕೊಂಡು ಪುರಾಣದಂತೆ ರಾಗವಾಗಿ ಓದುವರು. ಈ ಕೂಟದಲ್ಲಿ ಅಗ್ರಾಸನವನ್ನು ವಹಿಸಿದ್ದವರು ಆಂಧ್ರ ಕೇಸರಿ ಟಿ. ಪ್ರಕಾಶಂಗಾರು. ರಾಮಾಯಣವನ್ನು ಓದಿದವರು ಅನಂತಪುರದ ಶ್ರೀ ವೆಂಕಟರಾಮಾಚಾರ್ ಎಂಬುವರು. ಆ ಪುಸ್ತಕ ಪೋತನ ಕವಿಯ ತೆಲುಗು ಭಾರತ.

ಈ ಗುಂಪಿನಲ್ಲಿ ಶ್ರೀ ಪ್ರಕಾಶಂರವರನ್ನು ನೋಡಲು ಸಂತೋಷವಾಗುತ್ತಿತ್ತು. ಜೈಲು ವಾಸವನ್ನವರು ಸಂತೋಷವಾಗಿಯೇ ಅನುಭವಿಸುವರಂತೆ ಕಾಣುವರು. ಆದರೆ ಮಧ್ಯಾಹ್ನ ಎರಡು ಘಂಟೆ ಸುಮಾರಿನಲ್ಲಿ ಅವರ ಕೋಣೆಯಲ್ಲಿ ಅವರನ್ನು ಕಂಡದ್ದೇ ಆದರೆ ಕಣ್ಣುಗಳಲ್ಲಿ ನೀರು ಬರದೆ ಇರದು. ಅವರ ಮೈ ಬೆವತು ಕೋಡಿ ಹರಿಯುತ್ತಿರುವುದು. ಬೋನಿನಲ್ಲಿ ಕೂಡಿದ ಸಿಂಹದಂತೆ ಚಡಪಡಿಸುವರು. ಬಿಸಿಲಿನ ತಾಪವನ್ನು ತಾಳಲಾರದೆ, "ಕೆವ್, ಕೆವ್!" ಎಂದು ಕೆಮ್ಮುವರು. ಮಾರ್ಚಿ ತಿಂಗಳಲ್ಲೇ ಬೇಸಿಗೆ ಆರಂಭವಾಗಿಬಿಟ್ಟಿತೆಂದು ಪದೇ ಪದೇ ಹೇಳುವರು. ಏಪ್ರೆಲ್, ಮೇ ತಿಂಗಳುಗಳಲ್ಲಿ ಬಹಳ ಕಷ್ಟ ಪಟ್ಟಿರಬೇಕು.

ಶ್ರೀಯುತ ಪ್ರಕಾಶಂರವರಿಗೆ ವಯಸ್ಸು ೬೧. ೧೯೨೧ರಲ್ಲಿ ಅವರು ವಕೀಲ ವೃತ್ತಿಯನ್ನು ಕೈ ಬಿಟ್ಟಾಗ ಐದಾರುಲಕ್ಷ ರೂಪಾಯಿಗಳ ಆಸ್ತಿ ಇತ್ತು.

ಆದರೆ ಸಾರ್ವಜನಿಕ ಸೇವೆಯಲ್ಲಿ ಎಲ್ಲವನ್ನೂ ಕಳೆದುಕೊಂಡರು. ವಯಸ್ಸೂ ಆಗುತ್ತಾ ಬಂತು.

ಈ ವೃದ್ಧಾಪ್ಯದಲ್ಲಿ ಇಷ್ಟು ಕಷ್ಟವನ್ನು ಹೇಗೆ ಸಹಿಸಬಲ್ಲರು ಎಂಬ ಯೋಚನೆ ಬರುವುದು. ಆದರೆ ಇದಕ್ಕೆ ತಕ್ಕ ಬಲ ಅವರಲ್ಲಿದ್ದ ಎರಡು ನಂಬಿಕೆ ಗಳಿಂದ ಉಂಟಾಗುತ್ತಿತ್ತು. ಅವರಲ್ಲೊಂದು, ಸ್ವಾತಂತ್ರ್ಯದ ಹೋರಾಟದಲ್ಲಿ ಅವರಿಗಿದ್ದ ಅಪಾರ ನಂಬಿಕೆ ; ಅದಕ್ಕಾಗಿ ಎಂತಹ ಕಷ್ಟವನ್ನಾದರೂ ಅನುಭವಿಸ ಬಹುದೆಂಬ ದೃಢ ನಿಶ್ಚಯ ಅವರಿಗಿತ್ತು. ಇನ್ನೊಂದು "ಎಲೆಕ್ಟ್ರಿಕ್ ಸ್ಪಾರ್ಕಿಂಗ್ (Electric sparking)"ಗೆ ಅವರಿತ್ತ ಗೌರವ. ಅವರ ಕೋಣೆಯಲ್ಲೊಂದು "ಮ್ಯಾಗ್‌ನೆಟ್" (Magnet) ಇಟ್ಟಿರುತ್ತಿದ್ದರು. ಸೆರೆಯ ಅಧಿಕಾರಿಗಳೊಂದಿಗೆ ಬಹಳ ಜಗಳವಾಡಿ ಅದನ್ನು ಒಳಗಿಟ್ಟುಕೊಳ್ಳಲು ಅನುಮತಿಯನ್ನು ಪಡೆದಿದ್ದರು.

ಒಂದು ದಿನ ಉಷ್ಣವನ್ನು ತಾಳಲಾರದೆ ಅವರು ಪರಿತಪಿಸುತ್ತಿದ್ದುದನ್ನು ಕಂಡು ನಾನು, "ನೀವಿಷ್ಟು ಕಷ್ಟವನ್ನು ಹೇಗೆ ತಾನೆ ಸಹಿಸಬಲ್ಲಿರೋ" ಎಂದೆ. 'ಹೇಗೋ' ಎಂದು ಕೇಳಿ ನಕ್ಕರು. ಸ್ವಲ್ಪ ಹೊತ್ತಿನ ಮೇಲೆ ಒಳಗೆ ಮೇಜಿನ ಮೇಲಿದ್ದ, "ಮ್ಯಾಗ್‌ನೆಟ"ನ್ನು ತೋರಿಸಿ, "ಅದೇ ನನ್ನನ್ನು ಜೀವಸಹಿತ ಇಟ್ಟಿರುವುದು ಎಂದರು. ಅದರಿಂದ 'ಸ್ಪಾರ್ಕ್' ಮಾಡಿದ ತಣ್ಣೀರನ್ನೇ ಅವರು ಕುಡಿಯುವುದು. ಸ್ನಾನದ ನೀರನ್ನೂ ಸಹ ಮುಂಚಿತವಾಗಿಯೇ 'ಸ್ಪಾರ್ಕ್' ಮಾಡಿಬಿಡುವರು. ಸ್ನಾನಕ್ಕಾಗಿ ಒಂದು ತೊಟ್ಟಿ ತಣ್ಣೀರು ಅವರ ಕೊಠಡಿಗೆ ಬಂದುಬಿಡುವುದು. ಸ್ನಾನಕ್ಕೆ 'ಸ್ಪಾರ್ಕ್' ಮಾಡಿದ ಒಂದು ಹಂಡೆ ತಣ್ಣೀರಿಗಿಂತ 'ಸ್ಪಾರ್ಕ್' ಮಾಡಿದ ಒಂದೇ ಒಂದು ಉದ್ಧರಿಣೆ ನೀರು ಉತ್ತಮ ವೆಂದು ಅವರ ಮತ. ನಿಜವಾಗಿ "ಸ್ಪಾರ್ಕಿಂಗ್"ಗೆ ಇಷ್ಟು ಶಕ್ತಿ ಇದೆಯೆ ಎಂದು ಇನ್ನೊಮ್ಮೆ ಪ್ರಶ್ನಿಸಿದೆ. "ವಂಡರ್‌ಫುಲ್ (Wonderful)" ಎಂದುತ್ತರವಿತ್ತರು. ಅಲ್ಲದೆ "ವಂಡರ್‌ಫುಲ್, ವಂಡರ್‌ಫುಲ್" ಎಂದು ಮತ್ತೆ ಮತ್ತೆ ಹೇಳಿದರು.

ಆಗ ಅವರ ಮುಖದಲ್ಲಿ ಕಂಡುಬಂದ ತೇಜಸ್ಸು "ವಂಡರ್‌ಫುಲ್" ಆಗಿತ್ತೆಂಬುದರಲ್ಲಿ ಸಂದೇಹವಿಲ್ಲ.

"ನನ್ನ ಈ ಪ್ರಶ್ನೆಗೆ ಕೋಪಿಸಬೇಡಿ. ಬರೀ ವಂಡರ್‌ಫುಲ್ಲೋ, ವೆರಿವೆರಿ ವಂಡರ್‌ಫುಲ್ಲೋ" ಎಂದು ಹಾಸ್ಯದ ಪ್ರಶ್ನೆಯೊಂದನ್ನು ಹಾಕಿದೆ.

"ಇದೋ ನೋಡು, ನನ್ನನ್ನು ಕೇಳಬೇಡ. ಇದುವರೆಗೂ ಈ ತಿರುಚನಾಪಳ್ಳಿಯ ಸೆರೆಯಲ್ಲಿರುವ ಎಪ್ಪತ್ತೊಂದು ಜನಕ್ಕೆ ಚಿಕಿತ್ಸೆ ನಡೆಯುತ್ತಿದೆ. ಅವರನ್ನು ಕೇಳಿ ತಿಳಿದುಕೊ" ಎಂದರು. ಪುನಃ ಬಾಪಿನೀಡುರವರ ಗಂಟುರೋಗ, ಅವಿನಾಶಿಲಿಂಗಮ್‌ರವರ ಚಿಬ್ಬು, ಜೋತಿನಾಯಿಡುರವರ ವಾತರೋಗ ಮತ್ತು ರಾಮಾಶಾಸ್ತ್ರಿಗಳ ಚೇಳು ಕಡಿತ ಇದಕ್ಕೆಲ್ಲಾ ಯಾವ ಚಿಕಿತ್ಸೆಯಿಂದ ಗುಣವುಂಟಾಯಿತೆಂಬುದನ್ನು ಕೇಳಿ ತಿಳಿದುಕೋ" ಎಂದು ತಿಳಿಸಿದರು.

"ನೀವು ಹೇಳುವುದೇ ಸಾಕು. ನಿಮಗಿಂತಲೂ ಅನುಭವಶಾಲಿಗಳುಂಟೆ!" ಎಂದೆ.

ಆಮೇಲೆ ವಿಚಾರಿಸಿದ್ದರಲ್ಲಿ 'ಸ್ಪಾರ್ಕ್' ಚಿಕಿತ್ಸೆಯಿಂದ ಅನೇಕರಿಗೆ ಗುಣವುಂಟಾಗಿದ್ದು ತಿಳಿಯಬಂತು. ಆದರೆ ಆ ಚಿಕಿತ್ಸೆಯಲ್ಲಿ ನಂಬಿಕೆಯುಳ್ಳವರು ಬಹಳ ಸ್ವಲ್ಪವೆಂದು ತೋರಿತು. ಇಲ್ಲದಪಕ್ಷದಲ್ಲಿ ಬೆಳಿಗ್ಗೆಯೂ, ಸಾಯಂಕಾಲವೂ ಜೈಲಿನ ವೈದ್ಯರು ಬಂದೊಡನೆ ಜನರು ಅವರನ್ನಾರೀತಿ ಸುತ್ತುಗಟ್ಟುವರೆ? ಕೆಂಪು, ಹಳದಿ, ಹಸುರು ಎಂಬಂತೆ ಸೀಸೆಗಳಲ್ಲಿಪ್ಪ ಬಣ್ಣಬಣ್ಣದ ನೀರನ್ನೆಲ್ಲಾ ಅಷ್ಟು ಆತುರಗೊಂಡು ಕುಡಿಯುವರೆ? ಅದೂ ಜೈಲಿನಲ್ಲಿ ನೀರಿಗೆ ಅಂತಹ ಅಭಾವವಿರುವಾಗ!

ಆಂಧ್ರ ಕೇಸರಿಯ ಕೊಠಡಿಗೆ ಹೋಗಿ ನಾನೂ ಒಂದೆರಡು ಸಲ 'ಸ್ಪಾರ್ಕ್' ಚಿಕಿತ್ಸೆ ಮಾಡಿಕೊಂಡೆ. ಇವಕ್ಕೆ ಗುಣವುಂಟುಮಾಡುವ ಶಕ್ತಿ ಇದೆಯೋ ಇಲ್ಲವೋ, ಅಂತೂ ಒಂದು ವಿಧದ ಶಕ್ತಿಯುಂಟೆಂಬುದು ನಿರ್ಧರವಾಯಿತು. ಈ ಕಾಲದ ನಾವೆಲ್‌ಗಳಲ್ಲೂ, ಕಥೆಗಳಲ್ಲೂ ವಿದ್ಯುತ್ ಸಂಚಲನದ ಬಗ್ಗೆ ಆಗಾಗ ಓದುವೆನಲ್ಲವೆ? "ಗೋಪಾಲನ ಕಣ್ಣುಗಳೂ, ಪದ್ಮಳ ಕಣ್ಣುಗಳೂ ಸಂಧಿಸಿದವು. ಆ ಕ್ಷಣದಲ್ಲಿ ಗೋಪಾಲನ ದೇಹಾದ್ಯಂತ ವಿದ್ಯುಚ್ಛಕ್ತಿ ಪ್ರವಹಿಸಿದಂತಿತ್ತು. ಪದ್ಮಳ ಸ್ಥಿತಿಯೂ ಅದೇ ರೀತಿ ಇತ್ತು."

ಈ ರೀತಿ ಓದಿದರೆ ಮೊದಲೆಲ್ಲಾ ನನಗೆ ಅರ್ಥವಾಗದು. ದೇಹದಲ್ಲಿ ವಿದ್ಯು

ಚ್ಛಕ್ತಿ ಪ್ರವಹಿಸಿದರೆ ಹೇಗಿರುತ್ತೆಂಬುದನ್ನು 'ಸ್ಪಾರ್ಕ್' ಚಿಕಿತ್ಸೆಯ ಮೂಲಕ ಒಂದು ಸಲ ಕಲಿತುಕೊಂಡೆ. ಆಗಿನಿಂದ ನನಗೆ ಗೋಪಾಲ, ಪದ್ಮ ಮೊದಲಾದ ಕಥಾನಾಯಕ-ನಾಯಕಿಯರ ಮೇಲೆ ಅಪಾರ ಮರುಕವುಂಟಾಯಿತು.

## ೧೦. ಪ್ರಾತಃಕಾಲದ ಕೆಲವು ನೋಟಗಳು

ತಿರುಚನಾಪಳ್ಳಿಯ ಸೆರೆಯಲ್ಲಿ ಪ್ರತಿದಿನವೂ ಬೆಳಿಗ್ಗೆ ಏಳು ಘಂಟೆಯ ಮೇಲೆ ಕಾಣಬಹುದಾದ ನೋಟಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ. ಮಾಜಿ ಮಂತ್ರಿಗಳಿಂದ ಹಿಡಿದು ಸಾಧಾರಣ ದೇಶಸೇವಕರವರೆಗೆ ಎಲ್ಲರೂ ಕೈಯಲ್ಲಿ ಟಮ್ಲರ್‌ಗಳನ್ನು ಹಿಡಿದುಕೊಂಡು "ಜಿಲ್ಲಾ ಬೋರ್ಡ್" ಬ್ಲಾಕ್ ಕಡೆಗೆ ಹೋಗುವರು. (ಈ ಬ್ಲಾಕ್‌ನಲ್ಲಿ ಜಿಲ್ಲಾ ಬೋರ್ಡ್ ಪ್ರೆಸಿಡೆಂಟರುಗಳು ಕೆಲವರಿದ್ದರು.) ಆ ಬ್ಲಾಕಿನ ಬಾಗಿಲ ಬಳಿ ಎಲ್ಲರೂ ಸಾಲಾಗಿ ನಿಲ್ಲುವರು. ಒಂದು ದೊಡ್ಡ ತಪ್ಪಲೆ ಬಂದಿಳಿಯುವುದು. ದೊಡ್ಡ ಸೌಟೊಂದನ್ನು ಕೈಯಲ್ಲಿಟ್ಟುಕೊಂಡು, ಚಿತ್ತೂರು ಶ್ರೀ ಕೆ. ವರದಾಚಾರಿಯವರು ಬಂದು ಸೇರುವರು. ಸಾಲಾಗಿ ನಿಂತಿರುವವರಲ್ಲಿ ಕೆಲವರು ಆತುರಗೊಂಡು ಸ್ಥಳಗಳನ್ನು ಬಿಟ್ಟಗಲಿ ಅವರವರ ಪಂಚಪಾತ್ರೆಗಳನ್ನು ತೋರುವರು. "ಇದೇನಿದು! ಡಿಸಿಪ್ಲಿನ್ (discipline) ಎಂದರೆ ಡಿಸಿಪ್ಲಿನ್ನೇ. ಸ್ಥಳದಲ್ಲೆ ಹೋಗಿ ನಿಲ್ಲಿ!" ಎನ್ನುವರು. ಈ ವಿಷಯದಲ್ಲಿ ಹರಿಜನ ಎಂ. ಎಲ್. ಎ. ಗಳಿಗೆ ಕೂಡ ಅವರಲ್ಲಿ ಸಲಿಗೆ ಇಲ್ಲ. ಅವರುಗಳು ಕೂಡ ಸ್ಥಳವನ್ನು ಬಿಡಲಾಗದು!

ಆಮೇಲೆ ಇಬ್ಬರು ಮೂವರು ಬಕೆಟ್ಟುಗಳನ್ನು ತೆಗೆದುಕೊಂಡು ಬರುವರು. ಅವುಗಳಲ್ಲಿ ಶ್ರೀ ವರದಾಚಾರಿಯವರು ಕಾಫಿಯನ್ನು ಸುರಿಯುವರು. ಅವರು ಅದನ್ನು ತೆಗೆದುಕೊಂಡು ಹೋಗಿ ಸಾಲಾಗಿ ನಿಂತಿರುವವರ ಪಂಚಪಾತ್ರೆಯಲ್ಲಿ ಹಾಕಿಬಿಟ್ಟು ಬರುವರು. ಅಳತೆ ಎಂದರೆ ಸರಿಯಾದ ಅಳತೆ. ಸ್ವಲ್ಪವೂ ಹಿಂಚುಮುಂಚಿಲ್ಲದ ಅಳತೆ. ಯಾರಿಗೂ ಜಾಸ್ತಿ ಇಲ್ಲ; ಯಾರಿಗೂ ಕಡಿಮೆ ಇಲ್ಲ.

ಕಾಫಿಯನ್ನು ಸ್ವಲ್ಪ ಆರಿದ ನಂತರ ಕುಡಿದಿದ್ದೇ ಆದರೆ ತಳದಲ್ಲಿ ಕಪ್ಪಗೆ, (ಶ್ರೀರಾಮ, ಕೃಷ್ಣ, ಕೆ. ವರದಾಚಾರಿಯವರ ವರ್ಣದಂತೆ) ಅರ್ಧ ಅಂಗುಲ ಗಸಿ [illegible]ತ್ತು.

"ಇವತ್ತಿನ ಕಾಫಿ ಬಹಳ ಅನ್ಯಾಯ", "ಸ್ವಲ್ಪ ವಾಸಿ", "ಸೋಸಿದಂತೆಯೇ ಇಲ್ಲ". "ಜೈಲಿನಲ್ಲಿ ಸೀಮೆಯೆಣ್ಣೆ ಇಲ್ಲವಲ್ಲ! ಕಾಫಿಗೆ ಮಾತ್ರ ಹೇಗೆ ಬಂತು?" ಎಂಬ ಹಲವಾರು ಮಾತುಗಳನ್ನು ಹೊರಗೆಡಹಿ ಎಲ್ಲರೂ ಹಿಂತಿರುಗುವರು. ಆದರೆ ಈ ದೂರನ್ನು ಹೇಳಿಕೊಳ್ಳುವುದು ಯಾರಲ್ಲಿ?

ಒಂದು ದಿನ ನನ್ನ ಪಕ್ಕದಲ್ಲಿದ್ದ ಸ್ನೇಹಿತರೊಬ್ಬರು "ಅಯ್ಯಯ್ಯೋ, ಕಾಫಿಯಲ್ಲಿ ಇರುವೆ ಬಿದ್ದಿದೆಯಲ್ಲ!" ಎಂದರು. "ಕಥೆ ಗೊತ್ತಿಲ್ಲವೆ ನಿಮಗೆ?" ಎಂದವನು ಹಾಸ್ಯದ ಈ ತುಕ್ಕಡವೊಂದನ್ನು ಅವರಿಗೆ ಹೇಳಿದೆ. ಕಾಫಿ ಕುಡಿಯೋಣವೆಂದೊಬ್ಬರು ಹೋಟಲಿಗೆ ಹೋದರಂತೆ. ಕಾಫಿಯಲ್ಲಿ ಬಿದ್ದಿತ್ತಂತೆ ಒಂದು ಇರುವೆ. ಸರಿ. ಅದನ್ನು ಹಾಗೆಯೇ ತೆಗೆದುಕೊಂಡು ಹೋಗಿ ಹೋಟಲಿನ ಮ್ಯಾನೇಜರ್ ಮುಖದ ಮುಂದೆ ಹಿಡಿದು, "ನೋಡಿದಿರೇನ್ರಿ, ಕಾಫಿಯ ಲಕ್ಷಣ! ಕಾಫಿಯಲ್ಲಿ ಇರುವೆಯನ್ನು ಹಾಕೋದೇನ್ರಿ?" ಎಂದು ಬಹಳ ಕೋಪಗೊಂಡರಂತೆ. ಅದಕ್ಕೆ ಹೋಟಲು ಮಾನೇಜರ್, "ಹೌದು ಸ್ವಾಮಿ, ನೀವು ಕೊಡುವ ಒಂದೂಕಾಲಾಣೆಗೆ ಕಾಫಿಯಲ್ಲಿ ಇರುವೆಯನ್ನು ಹಾಕದೆ ಆನೆಯನ್ನು ಹಾಕುತ್ತಾರೆಯೇ?" ಎಂದನಂತೆ.

ಒಂದೂಕಾಲಾಣೆಯ ಕಾಫಿಯಲ್ಲೇ ಆನೆಯನ್ನು ಹಾಕಲು ಸಾಧ್ಯವಿಲ್ಲವೆಂದಮೇಲೆ ಬಿಟ್ಟಿ ಸಿಕ್ಕುವಂತಹ ಸೆರೆಯ ಕಾಫಿಯಲ್ಲಿ ಹಾಕಲಾಗುವುದೆ? ಇದನ್ನು ಕೇಳಿದ ನನ್ನ ಮಿತ್ರರು, "ಆನೆ ಹಾಕುವುದು ಬೇಡ ಸಾರ್, ಕೆ. ವರದಾಚಾರಿಯವರನ್ನೇ ಹಾಕಬಹುದಲ್ಲ?" ಎಂದರು. "ಹಾಗೆ ಬೇಕಾದರೆ ಮಾಡಬಹುದು" ಎಂದುಕೊಂಡೇ ನನ್ನ ಲೋಟವನ್ನು ನೋಡಿದೆ. ಅದರಲ್ಲೂ ಇರುವೆಗಳು! ನನ್ನ ಸ್ನೇಹಿತರು ನೋಡದಿದ್ದ ಸಮಯದಲ್ಲಿ ಕಾಫಿಯನ್ನು ಚೆಲ್ಲಿಬಿಟ್ಟು ಹೊರಟುಹೋದೆ.

ಮಾರನೇ ದಿನದಿಂದ ಲೋಟದಲ್ಲಿನ ಕಾಫಿಯನ್ನು ಗಮನಿಸಿ ನೋಡದೆಯೇ ಬಾಯಲ್ಲಿ ಸುರಿದುಕೊಳ್ಳುವ ಅಭ್ಯಾಸವನ್ನು ಕೈಗೊಂ[illegible]

ಶ್ರೀ ಕೆ. ವರದಾಚಾರಿಯವರನ್ನು ನನ್ನ ಮಿತ್ರರು ಆನೆಗೆ ಹೋಲಿಸಿದುದನ್ನು ಸಾಯಂಕಾಲ ನಾನು ಶ್ರೀ ಭೂವರಾಹ ಅಯ್ಯಂಗಾರ್ಯರೊ[illegible]ಗೆ ಹೇಳಿದೆ.

ಅದಕ್ಕವರು "ಇದು ಮಾತ್ರ ಅವರ ತಾಯಿಯವರ ಕಿವಿಯಲ್ಲಿ ಬಿದ್ದಿದ್ದರೆ ಆಗ ತಿಳಿಯುತ್ತಿತ್ತು ವಿಷಯ. ಶ್ರೀ ವರದಾಚಾರಿಯವರು ಸ್ವಲ್ಪ ಆಜಾನುಬಾಹು ವಾದ ಮನುಷ್ಯರು. ವೇಲೂರ್ ಸೆರೆಗೆ ಹೋದನಂತರ ಅವರು ತೂಕದಲ್ಲಿ ಹತ್ತು ಪೌಂಡು ಕಡಮೆಯಾಗಿಬಿಟ್ಟರಂತೆ. ಆದರೆ ಪಕ್ಕದಲ್ಲಿದ್ದವರಿಗೆ ಮಾತ್ರ ಅವರು ಇಳಿದುಹೋದರಂತೆಯೇ ಕಾಣಲಿಲ್ಲವಂತೆ. ಅವರ ಮಾತೃಶ್ರೀಯವರು 'ಇಂಟರ್‌ವ್ಯೂ'ಗೆ ಬಂದಿದ್ದ ಸಮಯದಲ್ಲಿ ಅವರನ್ನು ಕಂಡವರೇ, ''ಅಯ್ಯೋ ಮಗು, ಇಷ್ಟು ಬಡವಾಗಿಬಿಟ್ಟೆಯಲ್ಲೋ!" ಎಂದು ಅವರನ್ನು ತಬ್ಬಿಕೊಂಡು ಅತ್ತರಂತೆ.

ಶ್ರೀ ವರದಾಚಾರಿಯವರ ಸಂಸಾರಭಾರ ಅವರ ಹೊಟ್ಟೆಯ ತೂಕಕ್ಕೆ ತಕ್ಕಂತಹುವೆಂಬ ಸುದ್ದಿಯನ್ನು ಕೇಳಿದೆ. ಅವರಿಗೆ ಜವಾಬ್ದಾರಿಗಳೆಷ್ಟೋ; ಚಿಂತೆ ಎಷ್ಟೋ. ಆದರೆ ಕಾಂಗ್ರೆಸ್ಸಿಗೆಂದು ಎಲ್ಲವನ್ನೂ ಬಿಟ್ಟು ಹಾಗೆಯೇ ಬಂದುಬಿಟ್ಟರು. ಸೆರೆಯಲ್ಲಿ ಮತ್ತೊರ್ವರಿಗೆ ಸಂತೋಷದಾಯಕವಾದ ರೀತಿ ಯಲ್ಲಿ ಸದಾ ಕಾಲದಲ್ಲಿಯೂ ಹಸನ್ಮುಖಿಯಾಗಿ ಉಲ್ಲಾಸದಿಂದಿದ್ದು ಸೆರೆ ವಾಸ ವನ್ನು ಅನುಭವಿಸುತ್ತಿದ್ದಂಥವರಲ್ಲಿ ಶ್ರೀ ವರದಾಚಾರಿಯವರು ಬಹಳ ಮುಖ್ಯರು. ರಾಜಾಜಿಯವರ ಮುಂದೆ ರಾಮಾಯಣ ಪ್ರಬಂಧವು ಜರುಗುವಾಗ ಸಭೆಯಲ್ಲಿನ ಅಗ್ರಾಸನ ಅವರದೇ ಆಗಿತ್ತು. ಪಾಪಹಾರಕವೋ ಎಂಬ ಭಾವನೆ ಯನ್ನೀಯುವಂತೆ ಗಂಭೀರವಾದ ಧ್ವನಿಯಲ್ಲಿ ತ್ಯಾಗರಾಜ ಕೀರ್ತನೆಗಳನ್ನು ಬಹಳ ಮಧುರವಾಗಿ ಹಾಡುವರು. ಇವರು ಹಾಡುವುದನ್ನು ಕೇಳಿದರೆಂದರೆ ಚಿದಂಬರ ಮೊದಲಿಯಾರ್ ಕೂಡ ತ್ಯಾಗರಾಜ ಕೀರ್ತನೆಗಳಲ್ಲಿ ಆಸಕ್ತಿಗೊಳ್ಳು ವರು ಎಂಬುದಾಗಿ ರಾಜಾಜಿಯವರು ಆಗಾಗ್ಗೆ ಹೇಳುವರು.

ಕಾಫಿಯನ್ನು ಕುಡಿದು ಹಿಂತಿರುಗುವ ಸಮಯದಲ್ಲಿ ಪ್ರತಿದಿನವೂ ತಪ್ಪ ದಂತೆ ಶ್ರೀ ಸತ್ಯಮೂರ್ತಿಯವರು ಎದುರುಗೊಳ್ಳುವರು. ವ್ಯಾಯಾಮದ ನಿಮಿತ್ತ ವೇಗವಾಗಿ ನಡೆಯುವರು. ಆ ಸಮಯದಲ್ಲಿ ಅವರನ್ನು ಕಂಡವ ರೆಲ್ಲರೂ ಸಾಧಾರಣವಾಗಿ, ''ರಾತ್ರಿ ನಿದ್ದೆ ಮಾಡಿದಿರಾ?'' ಎಂದು ವಿಚಾರಿ ಸುವುದು ಪದ್ಧತಿ. ಅವರು, "ಎರಡೂವರೆ ಘಂಟೆ ಮೇಲೆ ಎಲ್ಲೋ ಸ್ವಲ್ಪ ಮಾಲ ಗಿದೆ" ಎಂದು ಖಿನ್ನಮನಸ್ಕರಾಗಿ ಉತ್ತರವೀಯುವರು.

"ನಿದ್ರೆ ಇಲ್ಲದಿರುವುದು, ವಿದ್ಯೆ ಮತ್ತು ಬಾಹುಬಲ" ಇವು ಮೂರೂ ರಾಜಲಕ್ಷಣಗಳೆಂದು ತಮಿಳು ನಾಡಿನ ಕವಿಯೋರ್ವನು ವರ್ಣಿಸಿರುತ್ತಾನೆ. ಈ ರಾಜಯೋಗ್ಯವಾದ ಲಕ್ಷಣಗಳನ್ನು ಸಂಪೂರ್ಣವಾಗಿ ಒಳಗೊಂಡಿದ್ದವರು ಶ್ರೀ ಸತ್ಯಮೂರ್ತಿಯವರೊಬ್ಬರೆಂದೇ ಹೇಳಬೇಕು. ಅವರ ದೇಹಾಲಸ್ಯಕ್ಕೆ ಕಾರಣಗಳು ಲೆಕ್ಕವಿಲ್ಲದಷ್ಟಿದ್ದರೂ, ಜೊತೆಗೆ ಈ ವ್ಯಾಧಿಯು ಬೇರೆ ಅವರನ್ನು ಕಿತ್ತು ತಿನ್ನುತ್ತಿತ್ತು. ಅವರ ಮನೋವ್ಯಾಕುಲತೆಯು ಹೆಚ್ಚಲು ಕಾರಣ ಇದೇ ಎಂದು ಅನೇಕರ ಅಭಿಪ್ರಾಯ. ಮನಸ್ಸಿನ ವ್ಯಾಕುಲತೆ ಎಂದರೆ ದೇಶದ ಈಗಿನ ದುಃಸ್ಥಿತಿಯ ವಿಚಾರದಲ್ಲಿ ಉಂಟಾಗುವ ವ್ಯಾಕುಲವೆ. ರಾಜಾಜಿಯವರಂತಹವರು ಕೆಲವರು ಸೆರೆಯೊಳಗೆ ಕಾಲಿಟ್ಟೊಡನೆ ಹೊರಗಣ ವ್ಯವಹಾರಗಳನ್ನು ಸಂಪೂರ್ಣವಾಗಿ ಮರೆತುಬಿಡಲು ಯತ್ನಿಸುವರು. ಆ ಪ್ರಯತ್ನದಲ್ಲಿ ಕೃತಾರ್ಥರೂ ಆಗುವರು. ಈ ಆತ್ಮಸಾಧನೆಯು ಕೆಲವರಿಗೆ ಮಾತ್ರ ಸಾಧ್ಯ. ಇಷ್ಟೇ ಅಲ್ಲದೆ ಸ್ವಭಾವವಾಗಿಯೇ ಯೋಚನಾಪರರಲ್ಲದವರು ಕೆಲವರು ಇಸ್ಪೀಟ್ ಆಟದಲ್ಲೇ ಹೊತ್ತನ್ನು ಕಳೆದುಬಿಡುವರು. ಮತ್ತೆ ಕೆಲವರೋ "ಬಾಕಿ ಇರುವ ಈ ಐದು ತಿಂಗಳು ಕಳೆಯುವುದು ಯಾವಾಗ? ಹೊರಗೆ ಹೋಗಿ ರುಚಿಯಾದ ಇಡ್ಲಿಯನ್ನು ಯಾವಾಗ ತಿನ್ನುತ್ತೇವೋ?" ಎಂಬ ಯೋಚನೆಯುಳ್ಳವರು.

ಶ್ರೀ ಸತ್ಯಮೂರ್ತಿಯವರು ಈ ದರ್ಜೆಯವರಲ್ಲ. ಸೆರೆಯಲ್ಲಿ ಕೂಡ ನಾಡಿನ ಸ್ವಾತಂತ್ರ್ಯಕ್ಕಾಗಿ ಎಡೆಬಿಡದೆ ಯೋಚಿಸುವರು. ಅವರನ್ನ ಹುರಿದುಂಬಿಸಲು "ನೋಡಿದಿರಾ, ಆಲ್ಬರ್ಟ್ ನಾಕ್ಸ್‌ನ ಮುಟ್ಠಾಳತನದ ಭಾಷಣವನ್ನ?" ಎಂದು ಈ ರೀತಿಯ ಯಾವುದಾದರೊಂದು ಮಾತನ್ನು ಹೇಳಬೇಕು. ಒಡನೆ "ಹೌದ್ಹಾದು, ಇಂತಹ ಭಾಷಣವನ್ನಲ್ಲದೆ ಮತ್ತೇನು ಮಾಡಿಯಾನು? ನಾವುಗಳು ಈ ರೀತಿ ಜೈಲಿನಲ್ಲಿ ಅಜ್ಜಿಗಳಂತೆ ರಾಮಾಯಣವನ್ನು ಕೇಳುತ್ತಾ ಕೂತಿದ್ದರೆ ಹೀಗೆಯೇ ಹೇಳುತ್ತಾನೆ. ಈಗ ಮಾತ್ರ ಪಾರ್ಲಿಮೆಂಟ್‌ನಲ್ಲಿ ನಾನಿದ್ದಿದ್ದರೆ ನೋಡಬಹುದಾಗಿತ್ತು. ಆ ಆಲ್ಬರ್ಟ್ ನಾಕ್ಸ್‌ನ ಪಲ್ಲು ಮುರಿಯುತ್ತಿದ್ದೆನೋ, ಬಿಡುತ್ತಿದ್ದೆನೋ?" ಎನ್ನುವರು.

ನನ್ನಹಾಗಿರುವವರಿಗೆ "ಮೂರು ತಿಂಗಳ ತುರಂಗವಾಸ ... ...

ಮೂರೇ ತಿಂಗಳು ಮಾತ್ರ. ಒಂಭತ್ತೆಂದರೆ ಒಂಭತ್ತೇ. ಆದರೆ ಶ್ರೀ ಸತ್ಯ ಮೂರ್ತಿಯವರಿಗೆ ಒಂಭತ್ತು ತಿಂಗಳ ಸೆರೆವಾಸವೆಂದರೆ, ಒಂಭತ್ತು ವರ್ಷಗಳ ಸೆರೆ ವಾಸದಂತೆ ಎಂದೇ ಹೇಳಬೇಕು. ಇದಕ್ಕೆ ಕಾರಣಗಳೆಂದರೆ—(೧) ಅವರ ದೇಹಾಲಸ್ಯ. (೨) ಸ್ವಾತಂತ್ರ್ಯ ಸಂಬಂಧವಾದ ಸಭೆಗಳು, ಪ್ರಸಂಗಗಳು, ವಾದವಿವಾದಗಳು ಇವುಗಳಿಲ್ಲದ ಜೀವನವೆಂದರೆ ಅವರಿಗೆ ನರಕಯಾತನೆಯಂ ತೆಯೇ ತೋರುವುದು. (೩) ಅವರ ಸಂಸಾರದ ಚಿಂತೆ. (೪) ಜೀವನಕ್ಕೆ ಸೊಬಗುಣಿಸುವಂಥ ವಿಷಯಗಳಲ್ಲಿ ಅವರಿಗಿದ್ದ ಆಸಕ್ತಿ.

ನಮ್ಮೆಲ್ಲರಿಗೂ ನಮ್ಮ ಬಂಧುಮಿತ್ರರೆಂದರೆ ವಿಶ್ವಾಸವುಂಟು ; ಹೆಂಡತಿ ಮಕ್ಕಳೆಂದರೆ ಪ್ರೀತಿಯೂ ಉಂಟು. ಆದರೆ ಶ್ರೀ ಸತ್ಯಮೂರ್ತಿಯವರಿಗೆ ಅವರ ಏಕಮಾತ್ರ ಪುತ್ರಿಯಲ್ಲಿ ಇದ್ದಂತಹ ವಾತ್ಸಲ್ಯವನ್ನು ನಾನು ಕಂಡದ್ದೇ ಇಲ್ಲ. ಮಗಳು 'ಇಂಟರ್‌ವ್ಯೂ'ಗೆ ಬಂದಿರುವುದಾಗಿ ತಿಳಿದೊಡನೆಯೇ, ಅವರ ಕೊಠಡಿಯಿಂದಲೇ 'ಲಕ್ಷ್ಮೀ!' ಎಂದು ಕೂಗುತ್ತಾ ಹೊರಗೆ ಬರುವರು. ಆಗ ಅವರ ನಡಿಗೆ ಓಟದಂತಿರುವುದು. ಅದನ್ನು ಕಂಡವರಿಗೆ "ಕರುವಿನ ಕೊರ ಳನ್ನು ಕೇಳಿ ಮುನ್ನುಗ್ಗಿ ಬರುವ ಹಸು"ವಿನ ನೆನಪು ಬರದೆ ಇರದು.

ಜೀವನದಲ್ಲಿ ಅಭಿರುಚಿಯನ್ನುಂಟುಮಾಡುವಂತಹ ಸನ್ನಿವೇಶಗಳಲ್ಲಿ ಅವರಿಗೆ ಅಪಾರ ಅಭಿಮಾನ. ಸಂಗೀತ, ನಾಟ್ಯ, ನಾಟಕ—ಇವುಗಳಲ್ಲಿ ಬಹಳ ಆಸಕ್ತಿ. ಪುಷ್ಪ, ಗಂಧ, ತಾಂಬೂಲಗಳಲ್ಲಿಯೂ ಹಾಗೆಯೇ.

"ಸೂಪರಿಂಟೆಂಡೆಂಟರನ್ನು ಒಂದು ಮಾತು ಕೇಳಬೇಕೆಂದಿರುತ್ತೇನೆ. ನೀನೇನು ಹೇಳುತ್ತೀ" ಎಂದು ನನ್ನನ್ನೊಂದು ದಿನ ಕೇಳಿದರು. "ನಾನು ಹೇಳುವುದೇನು? ಅಗತ್ಯವಾಗಿ ಕೇಳಬಹುದಲ್ಲ" ಎಂದೆ. "ಕೆ. ಪಿ. ಸುಂದರಾಂ ಬಾಳ್ ತಿರುಚನಾಪಳ್ಳಿಗೆ ಬರುವುದಾಗಿ ಸುದ್ದಿ. ಇಲ್ಲಿಗೆ ಬಂದು ನಮಗೆ ಒಂದು ಕಚೇರಿ ನಡೆಸಬಹುದಲ್ಲ!" ಎಂದು ಹೇಳುತ್ತಿರುವಾಗ ಅವರ ಮುಖದಲ್ಲಿ ಉತ್ಸಾಹವು [illegible] ತುಳುಕುತ್ತಿತ್ತು.

"ಸೊಗಸಾದ ಯೋಚನೆ. ಈ ರೀತಿ ಯಾವುದಾದರೊಂದು ಏರ್ಪಾ ಡನ್ನು [illegible]. ಒಳ್ಳೆ ಕಚೇರಿ ಕೇಳಿ ಬಹಳ ದಿನಗಳಾದುವು. ಪಕ್ಕವಾದ್ಯ

ದವರು ಅಲಂಕಾಡು ಸುಂದರೇಶಯ್ಯರ್ ಮತ್ತು ಮದರಾಸ್ ವೇಣುನಾಯಕರು ತಾನೇ ? " ಎಂದೆ.

"ಆದರೆ ಸ್ವಲ್ಪ ಯೋಚಿಸಬೇಕಪ್ಪ. ಹೊರಗಿನವರೆಲ್ಲಾ ನಾವುಗಳು ಇಲ್ಲಿ ಷೋಕಾಗಿ ಸಂಗೀತ ಕಚೇರಿ ಕೇಳಿಕೊಂಡು ಖುಷಿಯಾಗಿದ್ದೇವೆಂದು ಹರಟೆಗೆ ಆರಂಭಿಸಿಬಿಡುತ್ತಾರೆ" ಎಂದರು.

"ಇಲ್ಲಿ ಬಹಳ ಖುಷಿಯೆಂದು ತಿಳಿದಾದರೂ ಆ ಹರಟೆ ಮಲ್ಲರು ಜೈಲಿಗೆ ಬರಲಿ" ಎಂದು ಮರುತ್ತರವಿತ್ತೆ.

ಶ್ರೀ ಸತ್ಯಮೂರ್ತಿಗಳು ಗಂಧ, ಪುಷ್ಪವೇ ಮೊದಲಾದ ಮಂಗಳವಸ್ತುಗಳಲ್ಲಿ ತಮಗಿಷ್ಟ ಶ್ರದ್ಧೆಯನ್ನು ಮರೆಮಾಚಲು ಯತ್ನಿಸಿದವರೇ ಅಲ್ಲ. ತಮಿಳು ನಾಡಿನಲ್ಲಿ ಮುಕ್ಕಾಲುವಾಸಿ ಎಲ್ಲರೂ ಅದನರಿತಂತೆಯೇ ತೋರುತ್ತದೆ. ಸಿವಿಲ್ ಜೈಲಿಗೆ ಸುತ್ತಲೂ ತಡಿಕೆ ಕಟ್ಟುವ ಮುಂಚೆ ದಿನವೂ ಸಾಯಂಕಾಲ ರಾಜಕೀಯ ಕೈದಿಗಳು ಕೆಲವರು ಬೇಲಿಯ ಕಿಂಚಿನಲ್ಲಿ ಬಂದು ನಿಂತುಕೊಳ್ಳುವುದು ವಾಡಿಕೆ 'ಇಂಟರ್‌ವ್ಯೂ'ಗಾಗಿಯೂ, ಸುಮ್ಮನೆ ತಮಾಷೆಗೋಸ್ಕರವಾಗಿಯೂ ಬಂದು ನಿಂತ ಜನಗಳನ್ನು ಬೇಲಿಯ ಹಿಂದೆ ನಿಂತು ನೋಡುವುದರಲ್ಲಿ ಅನೇಕರಿಗೆ ಒಂದು ವಿಧವಾದ ತೃಪ್ತಿ. ಕೆಲವರು ಹೊರಗೆ ನಿಂತವರೊಡನೆ ಸಂಭಾಷಣೆಯನ್ನು ಕೂಡ ನಡೆಸುವರು. ಒಂದು ದಿನ ಶ್ರೀ ಭೂವರಾಹ ಐಯಂಗಾರ್‍ಯರ ಮಗ ಆ ಗುಂಪಿನಲ್ಲಿದ್ದನು. ಅವನನ್ನು ಶ್ರೀ ಸತ್ಯಮೂರ್ತಿಗಳು ಕಂಡರು. ಒಡನೆ "ಲೋ ! ನೀನು ಭೂವರಾಹ ಐಯಂಗಾರ್‍ಯರ ಮಗ ಅಲ್ಲವೇನೋ" ಎಂದು ಕೇಳಿದರು. "ಹೌದು, ಮಾಮ !" ಎಂದ. "ಏನು ತಂದಿದ್ದೀಯೋ ?" ಎಂದು ಪ್ರಶ್ನಿಸಿದರು. ಒಡನೆ ಬಂತು ಉತ್ತರ, "ಚಂದನ ತಂದಿದ್ದೇನೆ, ಮಾಮ" ಎಂದು.

ತಿರುಚನಾಪಳ್ಳಿ ಸೆರೆಯಲ್ಲಿ ಶ್ರೀ ಸತ್ಯಮೂರ್ತಿಗಳ ಜೀವನವನ್ನು ಕೆಲಕಾಲ ನೋಡಿದ ನಂತರ ನನಗೆ ಅವರ ವಿಷಯದಲ್ಲಿ ಪಶ್ಚಾತ್ತಾಪವು ಉಂಟಾಯಿತು. ಅಷ್ಟೇ ಅಲ್ಲ. ಅವರನ್ನು ಜೈಲಿಗೆ ಕಳುಹಿಸುವುದೇ ಕ್ರೂರವಾದ ಕೆಲಸವೆಂದೆನಿಸಿತು.

ಬೆಳಗ್ಗೆ ಕಾಫಿಯನ್ನು ಮುಗಿಸಿಕೊಂಡು ಸೆರೆಯನ್ನು ಒಂದು ಸುತ್ತು ಸುತ್ತಿ ಬಂದರೆ ಅಲ್ಲಲ್ಲಿ ಮರದ ನೆರಳಿನಲ್ಲಿ ಕುಳಿತು ಒಬ್ಬೊಬ್ಬರೇ ಅಥವಾ ಹಲವರು ಸೇರಿ ಓದುವುದನ್ನು ಕಾಣಬಹುದು. ರಾಜಾಜಿಯವರ ಬ್ಲಾಕ್‌ಗೆ ಹಿಂದಿರುವ ಮಾವೊಂದರ ನೆರಳಿನಲ್ಲಿ ಈಚಲು ಚಾಪೆಯನ್ನು ಹಾಕಿಕೊಂಡು ಶ್ರೀ ಗೋಪಾಲ ರೆಡ್ಡಿಯವರು ಕುಳಿತಿರುವರು. ಅವರೊಡನೆ ಇನ್ನೂ ಇಬ್ಬರು-ಮೂವರು ಇರುವರು. ಅವರು ಯಾರಿಗಾದರೂ ಬಂಗಾಳಿಯನ್ನು ಹೇಳಿಕೊಡುತ್ತಿರುವರು. ಇಲ್ಲದಿದ್ದರೆ, ತಮಿಳೋ ಉರ್ದುವೋ ಅಥವಾ ಇನ್ನಾವುದಾದರೂ ಭಾಷೆಯನ್ನೋ ತಾವೇ ಕಲಿಯುತ್ತಿರುವರು.

"ಚಿನ್ನದಂತಹ ಮನುಷ್ಯರು" ಎಂಬ ಹೊಗಳಿಕೆಗೆ ಅರ್ಹರಾದವರಲ್ಲಿ ಶ್ರೀ ಗೋಪಾಲರೆಡ್ಡಿಯವರೊಬ್ಬರು. ಧನಾಢ್ಯ ಕುಟುಂಬದಲ್ಲಿ ಹುಟ್ಟಿದಂಥವರು. ಹಲವಾರು ಸಲ ಸೆರೆ ವಾಸವನ್ನನುಭವಿಸಿ ತ್ಯಾಗದ ಶೋಧನೆಯಲ್ಲಿ ವಿಜಯಿಗಳಾದವರು. ಶಾಂತಿನಿಕೇತನದಲ್ಲಿ ಅಧ್ಯಯನ ಮಾಡಿ ಪಟ್ಟವನ್ನೇರಿದವರು. ಶಾಂತಿನಿಕೇತನದ ಕಲೋನ್ನತೆಯೂ, ಸೇವಾಗ್ರಾಮದ ಮಹಾತ್ಯಾಗವೂ ಅವರಲ್ಲಿ ಒಂದುಗೂಡಿದ್ದವು.

ಈಗೆರಡು ವರ್ಷಗಳ ಹಿಂದೆ ತಾನೆ ಅವರ ವಿವಾಹವಾಯಿತು. ಅವರು ಮದುವೆಯಾದವರೂ ಸಹ ಶಾಂತಿನಿಕೇತನದಲ್ಲಿ ಓದಿ ತೇರ್ಗಡೆಯಾದವರೆ. ಮದುವೆಯಾದ ಹೊಸದಾದರೂ ಪತ್ನಿಯನ್ನು ಬಿಟ್ಟುಬಿಟ್ಟು ಸೆರೆಯನ್ನು ಹೊಕ್ಕರು. ಅವರನ್ನು ಹಿಂಬಾಲಿಸಿ ಅವರ ಪತ್ನಿಯೂ ಸಹ ಸೆರೆಗೆ ಹೋದರು.

ಲಕ್ಷಗಟ್ಟಲೆ ಆಸ್ತಿಯುಳ್ಳವರು ಮತ್ತು ಮಾಜಿ ಮಂತ್ರಿಗಳು ಆದ ಅವರನ್ನು ವಿಚಾರಣೆ ಮಾಡಿ ದಂಡನೆಯನ್ನು ವಿಧಿಸಿದ ಮ್ಯಾಜಿಸ್ಟ್ರೇಟರು ಅವರು ಯಾವ ದರ್ಜೆಗೆ ಸೇರಿದವರು ಎಂಬುದನ್ನು ಹೇಳದೆಹೋದರು. ಆದುದರಿಂದ ಅವರನ್ನು ಮೂರನೇ ತರಗತಿಯ ಗಾಡಿಯಲ್ಲೇ ಕರೆದುಕೊಂಡು ಬಂದರು.

ಈ ವಿಷಯವನ್ನು ಅವರಲ್ಲೊಂದು ದಿನ ಪ್ರಸ್ತಾಪಿಸಿದೆ. ಆವೇಶಗೊಂಡವರಂತೆ ಬಡಬಡಿಸುವರೆಂದು ನಿರೀಕ್ಷಿಸಿದೆ. ಲೇಶವಾದರೂ ಕೆರಳಲಿಲ್ಲ. ಹಸೀ ಬಾಳೆ [illegible]ಯಂತೆಯೆ. ಅಷ್ಟು ಶಾಂತತೆ.

ಅವರ ಮುಖದಲ್ಲಿ ಆತುರ, ಕ್ರೋಧ ಮೊದಲಾದ ಭಾವನೆಗಳನ್ನು ಕಾಣ ಬೇಕೆಂದರೆ ಅದಕ್ಕೆ ಒಂದು ಮಾರ್ಗವುಂಟು. ಶ್ರೀ ರವೀಂದ್ರರ ಕವಿತೆಗಳನ್ನೋ, ನಾಟಕಗಳನ್ನೋ ಬಂಗಾಳಿಯಲ್ಲಿ ಓದುವಂತೆ ಹೇಳಬೇಕು. ವಿಷಯವೇನೋ ನಮಗೆ ಅಷ್ಟು ಮುಂದಟ್ಟಾಗದು. ಆದರೆ ಕಿವಿಯಲ್ಲಿ ಮಾತ್ರ ಇಂಪಾದ ಧ್ವನಿ ಯೊಂದು ಬೀಳುವುದು. ಆಗ ಅವರ ಮುಖವನ್ನು ಗಮನಿಸಿ ದ್ದೇಆದರೆ ನಾಟಕ ದಲ್ಲಿಯ ಪಾತ್ರಗಳ ಅನೇಕ ತರದ ಭಾವನೆಗಳನ್ನು ಅವರೂ ಅನುಭವಿಸುವ ರೆಂಬುದನ್ನು ಪ್ರತ್ಯಕ್ಷವಾಗಿ ಕಾಣಬಹುದು.

ಬೆಳಿಗ್ಗೆ ನೋಡಬಹುದಾದ ಅನೇಕ ವಿಧದ ದೃಶ್ಯಗಳನ್ನು ಹೇಳಿ ಮುಗಿಸುವ ಮೊದಲು ಅರುಣೋದಯಕ್ಕೆ ಮುಂಚೆಯೇ ಕಾಣಬಹುದಾದ ದೃಶ್ಯ ವೊಂದನ್ನು ಹೇಳಬಯಸುತ್ತೇನೆ ಬೆಳಗಾಗುತ್ತಲೇ ಕ್ವಾರ್ಟರ್ಸಿನಲ್ಲಿ ವಾರ್ಡರು ಗಳು ಬಂದು ನಮ್ಮನ್ನಿಟ್ಟಿದ್ದ ಕೊಠಡಿಗಳ ಬೀಗವನ್ನು ಸಾಲಾಗಿ ತೆಗೆಯುತ್ತಾ ಹೋಗುವರು. ಹಾಗೆ ತೆಗೆಯುತ್ತಿರುವಂತೆಯೇ ಹೊರಗೆ ದಢದಢವೆಂದು ಓಡುವ ಸದ್ದು ಕೇಳಿ ಬರುವುದು. ಯಾರಾದರೂ ಜೈಲಿನಿಂದ ತಪ್ಪಿಸಿಕೊಳ್ಳಲು ಆ ರೀತಿ ಓಡುವರೋ ಎಂಬಂತೆ ತೋರುವುದು. ಆದರೆ ಆ ಓಟಗಾರರಲ್ಲಿ ಅಣ್ಣಾಜಿ ವೇದರತ್ನಂ ಪಿಳ್ಳೆಯವರನ್ನು ಕಂಡೊಡನೆ, ಹಾಗೇನೂ ಅಲ್ಲ, ಇವರು ಗಳು ತಪ್ಪಿಸಿಕೊಳ್ಳುವುದಕ್ಕೆಂದು ಓಡಲಿಲ್ಲವೆಂದು ತಿಳಿಯುವುದು. ಕಾರಣ, ತಿರುಚನಾಪಳ್ಳಿ ಸೆರೆಯಲ್ಲಿದ್ದ ರಾಜಕೀಯ ಖೈದಿಗಳಲ್ಲೆಲ್ಲಾ ಸಂಪೂರ್ಣ ಸತ್ಯಾ ಗ್ರಹಿಗಳೊಬ್ಬರಿದ್ದರೆ ಅವರು "ಅಣ್ಣಾಜಿ" ಎಂಬುದು ಎಲ್ಲರೂ ಅರಿತ ಮಾತಾ ಗಿತ್ತು. 'ಎ' ತರಗತಿಯ ಖೈದಿಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಣ್ಣು ಮೊದ ಲಾದುವುಗಳನ್ನು ಹೊರಗಿನಿಂದ ತರಿಸಿಕೊಳ್ಳಲು ಅನುಮತಿಯುಂಟಲ್ಲವೆ? ಅಂತಹ ಅನುಮತಿಯನ್ನು ಉಪಯೋಗಿಸಿಕೊಳ್ಳದವರು ಆ ಸೆರೆಗೆಲ್ಲಾ ಶ್ರೀ ವೇದರತ್ನಂರವರೊಬ್ಬರೇ ಎಂದು ಕಾಣುತ್ತದೆ. ತಾವು ತರಿಸಿಕೊಳ್ಳದೆ ಇದ್ದದ್ದು ಮಾತ್ರವಲ್ಲ; ಇತರರು ತರಿಸಿಕೊಂಡಿದ್ದನ್ನೂ ತಿನ್ನಲೊಲ್ಲರು. ಸೆರೆ ಯಲ್ಲಿ ಒದಗಿಸುತ್ತಿದ್ದಂತಹ ಊಟವನ್ನು ಮಾತ್ರವೇ ಉಣ್ಣುವರು. ವಾರ ಕ್ಕೊಂದು ಸಲ ಉಪವಾಸವನ್ನೂ, ಮೌನವ್ರತವನ್ನೂ ಮಾಡುವರು. ಇಂತಹ ಕಟ್ಟು ಕಟ್ಟಳೆಗಳಿದ್ದೂ ಕೂಡ ಅಣ್ಣಾಜಿಯವರು ಸ್ವಲ್ಪ ಉಬ್ಬಿಯೇ ಇದ್ದರು.

"ಋಣವನ್ನು ತೀರಿಸುತ್ತೇವೆ" ಎಂಬ ಮನೋಭಾವನೆಯು ಅವರ ದೇಹದಲ್ಲೂ ಹೊರಹೊಮ್ಮಿದ್ದಿತು. ಇದರ ಪರಿಹಾರಕ್ಕಾಗಿಯೇ ಅರುಣೋದಯದಲ್ಲಿ ಓಡುವ ಅಭ್ಯಾಸವನ್ನಿಟ್ಟುಕೊಂಡಿದ್ದರು. ಶ್ರೀ ವೇದರತ್ನಂ ತಮ್ಮ ರೂಮಿನಿಂದ ಓಡತೊಡಗಿದಗೋ ಇಲ್ಲವೋ ನನ್ನ ಪಕ್ಕದ ರೂಮಿನಲ್ಲಿದ್ದ, ದಿಂಡಿಗಲ್ ಕೆ. ಗಣೇಶ್ವರರವರು, "ಸರಿ, ಸೀಡಿ ಬರ್ರಾನಿನಿಂದ ಹೊರಟಿದ್ದಾಯಿತು" ಎನ್ನುವರು. ನಮ್ಮ ರೂಮೆದುರಿನಲ್ಲಿ ಬರುವಾಗ "ಟೋಬ್ರುಕ್ ಬಂದಿತು!" ಎನ್ನುವರು. ಕ್ವಾರ್ಟರ್ಸ್ ಮೂಲೆಯನ್ನು ಸೇರಿದೊಡನೆ, "ಬೆಂಗಾಸಿಯನ್ನು ಹಿಡಿದಿದ್ದಾಯಿತು!" ಎನ್ನುವರು. ಅವರಲ್ಲಿಂದ ಹೊರಟಾಗ, "ಬೆಂಗಾಸಿಯನ್ನು ಬಿಟ್ಟಿದ್ದಾಯಿತು!" ಎನ್ನುವರು. "ತಿರುಗಿಯೂ ಸೀಡಿ ಬರ್ರಾನಿಗೆ ಬಂದಿದ್ದಾಯಿತು!" ಎಂದು ಕಥೆಯನ್ನು ಮುಗಿಸುವರು.

ಆಗ ಲಿಬಿಯಾದಲ್ಲಿ ಬೆಂಗಾಸಿಯವರೆಗೆ ಸ್ವಲ್ಪ ವೇಗವಾಗಿಯೇ ಮುಂದರಿದ ಬ್ರಿಟಿಷ್ ಪಡೆಗಳು ಪುನಃ ಹಿಂದೆ ಸರಿದು ಸೀಡಿ ಬರ್ರಾನಿಯನ್ನು ಮುತ್ತಿದ್ದವು! ಶ್ರೀ ಗಣೇಶ್ವರರವರ ಉತ್ಸಾಹಪೂರಿತವಾದ ವರ್ಣನೆಗೆ ಕಾರಣ ಇದೇ.

ಶ್ರೀ ವೇದರತ್ನಂರವರು ಮಹಾಪ್ರಾಜ್ಞರೆಂದು ಕೇಳಿದ್ದೆ. ಅದೆಷ್ಟು ನಿಜವೆಂದು ನನಗೆ ಗೊತ್ತಾದುದು ಜೈಲಿನಲ್ಲೇ. ನನಗೆ ಅವರ ಪರಿಚಯವುಂಟಾಗಿ ಈಗ ಹನ್ನೆರಡು ವರ್ಷಗಳ ಮೇಲಾಯಿತು. ಆದರೆ ಪ್ರಯೋಜನ! ಅವರಿಗೆ ಸಂಗೀತದಲ್ಲಿ ಇಷ್ಟರಮಟ್ಟಿನ ಶ್ರದ್ಧೆಯಿಂಟು, ಅವರೇ ಕೊಳಲನ್ನು ಬಾರಿಸುವರು ಎಂಬುದು ಕೂಡ ಜೈಲಿನಲ್ಲೇ ತಿಳಿದುಬಂದದ್ದು. ಒಂದು ಮಧ್ಯಾಹ್ನ ತಿರುಪತಿ ಕೆ. ವರದಾಚಾರಿಯವರ ಹಾಡುಗಾರಿಕೆ, ಅವರ ಕೊಳಲುವಾದನ ನಡೆಯಿತು. ಜೊತೆಗೆ ರಾಜಾಜಿಯವರು ತಾಳವನ್ನು ಹಾಕುತ್ತಿದ್ದರು. ಈ ಗೋಷ್ಠಿಯ ಗಾನವನ್ನು ಕೇಳಿ ತಲೆದೂಗಿದ ನಮಗೆ ಆ ಮಧ್ಯಾಹ್ನ ಬಹಳ ಸ್ವಾರಸ್ಯವುಳ್ಳದ್ದಾಗಿತ್ತು.

ಶ್ರೀ ವೇದರತ್ನಂರವರು ಅರುಣೋದಯದಲ್ಲಿ ಓಡಲು ಆರಂಭಿಸಿದವರು ರಾತ್ರಿವರೆಗೂ ಓಡುತ್ತಲೇ ಕೆಲಸಕಾರ್ಯಗಳನ್ನು ಮಾಡುವರು. ಅವರಿಗೆ ಪುರಸತ್ತೆ[illegible]ೀ ಇಲ್ಲ. ವಾಲ್ಮೀಕಿ ರಾಮಾಯಣವನ್ನು ಕೇಳುವರು; "ತಿರು

ವಾಯಿಮುಡಿ ''ಯನ್ನು ಓದುವರು. ಊಟದ ಸಮಯದಲ್ಲಿ ಬಡಿಸುವರು. ಯಾರಾದರೂ ಹಿಂದೀ ಕಲಿಯಲಿಚ್ಛಿಸಿದರೆಂದರೆ ಅವರ ಕೊಠಡಿಯನ್ನು ಹುಡುಕಿಕೊಂಡು ಹೋಗಿ ಹೇಳಿಕೊಡುವರು. ಸೆರೆಯಲ್ಲಿ ಕಟ್ಟುಪಾಡಿನ ಜೀವನವನ್ನು ನಡೆಸಿದಂಥವರೊಬ್ಬರು ಶ್ರೀ ವೇದರತ್ನಂರವರು. ಇವರು ತಂಜಾವೂರು ಜಿಲ್ಲೆಗೆ ಸೇರಿದವರೆಂಬುದನ್ನು ತಿಳಿಸಲು ನನಗೆ ಬಹಳ ಹೆಮ್ಮೆಯ ವಿಷಯವಾಗಿದೆ.

ಈಗೆರಡು ವಾರಗಳ ಹಿಂದೆ ''ಅಣ್ಣಾಜಿ''ಯವರನ್ನು ಮಧುರೆಯಲ್ಲಿ ನೋಡಿದ್ದೆ. ಬಹಳ ತೆಳುವಾಗಿಬಿಟ್ಟಿದ್ದರು; ಸೆರೆಯಲ್ಲಿ ಅವರು ಓಡುವ ಅಭ್ಯಾಸವನ್ನಿಟ್ಟುಕೊಂಡಿದ್ದು ವ್ಯರ್ಥವಾಗಲಿಲ್ಲವೆಂದುಕೊಂಡೆ. ಹಾಗೆಯೇ ಅವರಂತಹ ಮಹಾನುಭಾವರನೇಕರು ದೇಶೋದ್ಧಾರಕ್ಕಾಗಿ ಅನುಭವಿಸಿದ ಕಷ್ಟವು ಕೂಡ ವ್ಯರ್ಥವಾಗದೆಂದು ನಂಬುತ್ತೇನೆ.



# ಕೆಲವು ಉತ್ತಮವಾದ ಕಥೆ ಪುಸ್ತಕಗಳು

---

| | |
|---|---|
| ಗರುಡಗಂಬದ ದಾಸಯ್ಯ–ಗೊರೂರು ರಾಮಸ್ವಾಮ್ಯಯ್ಯಂಗಾರ್ | ೨ ೦ ೦ |
| ಕಲಾವಿದನ ತ್ಯಾಗ–ಶ್ರೀಮತಿ ಜಯಲಕ್ಷ್ಮೀ ಆರ್. ಶ್ರೀನಿವಾಸನ್ | ೧ ೦ ೦ |
| ಚಂದ್ರಗ್ರಹಣ ಮತ್ತು ಇತರ ಕಥೆಗಳು— ಆನಂದ | ೧ ೦ ೦ |
| ಕೆಲವು ಕಥೆಗಳು— ,, | ೧ ೦ ೦ |
| ಸ್ವಪ್ನ ಜೀವಿ ಮತ್ತು ಇತರ ಕಥೆಗಳು— ,, | ೦ ೧೨ ೦ |
| ವಿಜ್ಞಾನಿಗಳ ಕಥೆಗಳು— ಎನ್. ಕೆ. ನರಸಿಂಹಮೂರ್ತಿ | ೧ ೦ ೦ |
| ರತೀದೇವಿ ಮತ್ತು ಇತರ ಕಥೆಗಳು–ಎಂ. ವಿ. ಸೀತಾರಾಮಯ್ಯ | ೧ ೦ ೦ |
| ದೇವುಡು ಕಥೆಗಳು— ದೇವುಡು | ೦ ೧೨ ೦ |
| ಸಂಗಮ— ಸಿ. ಕೆ. ನಾಗರಾಜರಾವ್ | ೦ ೧೨ ೦ |
| ಒಡೆಯರ ಕಾಲದ ಕಥೆಗಳು— ಕಂ. ಕೃಷ್ಣ ಅಯ್ಯಂಗಾರ್ | ೦ ೮ ೦ |
| ಕೋಲಾರದ ನಾಡೂ ಕಥೆಗಳು— ಮಾ. ವೆಂಕಟಕೃಷ್ಣಪ್ಪ | ೦ ೮ ೦ |
| ತಾರಾಯಿ— ಸಿ. ಕೆ. ವೆಂಕಟರಾಮಯ್ಯ | ೧ ೪ ೦ |
| ಕೆಲವು ಸಣ್ಣ ಕಥೆಗಳು— ಶ್ರೀನಿವಾಸ | ೧ ೮ ೦ |
| ಸಣ್ಣ ಕಥೆಗಳು ,, | ೧ ೦ ೦ |
| ನ ಲ್ವ್ವ ಸಣ್ಣ ಕಥೆಗಳು ,, | ೦ ೧೨ ೦ |
| ಸಣ್ಣ ಕಥೆಗಳು ೪ ,, | ೧ ೪ ೦ |
| ,, ೫ ,, | ೦ ೧೪ ೦ |
| [illegible]— ಬಸವರಾಜ ಕಟ್ಟೀಮನಿ | ೧ ೦ ೦ |
| [illegible] ಪಂಚತಂತ್ರದ ಕಥೆಗಳು ೧ ಆ. ನಾರಾಯಣಸ್ವಾಮಿ ಅಯ್ಯರ್ | ೧ ೬ ೦ |
| ,, ೨ ,, | ೧ ೦ ೦ |

ನಮ್ಮಲ್ಲಿ ಎಲ್ಲಾ ಕವಿಗಳ, ಕಥೆಗಾರರ, ಕಾದಂಬರಿಕಾರರ, ನಾಟಕಕರ್ತರ ಪುಸ್ತಕಗಳೂ, ಪೌರಾಣಿಕ ಧಾರ್ಮಿಕ ಗ್ರಂಥಗಳೂ, ಜೀವನ ಚರಿತ್ರೆಗಳೂ ಮತ್ತು ಎಲ್ಲಾ ಸ್ಕೂಲ್ ಪುಸ್ತಕಗಳೂ ದೊರೆಯುತ್ತವೆ.

---

**ಸತ್ಯಶೋಧನ ಪುಸ್ತಕ ಭಂಡಾರ,**

**ಕೋಟೆ, ಬೆಂಗಳೂರು ನಗರ.**